# ಮುಸ್ಲಿಂ ಮಹಿಳೆಯ ಸಾಮಾಜಿಕ ಬದುಕು

(ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಸಂಪ್ರಬಂಧ)

ಸಂಶೋಧಕಿ
ರಜಿಯಾ ಬಾನು ಕೆ.ಎಸ್.

ಮಾರ್ಗದರ್ಶಕರು
ಡಾ. ಶಿವಾನಂದ ಎಸ್. ವಿರಕ್ತಮಠ
ಪ್ರವಾಚಕರು



ಮಹಿಳಾ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
೨೦೦೮

# ಮುಸ್ಲಿಂ ಮಹಿಳೆಯ ಸಾಮಾಜಿಕ ಬದುಕು

(ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಸಂಪ್ರಬಂಧ)


ಸಂಶೋಧಕಿ
ರಜಿಯಾ ಬಾನು ಕೆ.ಎಸ್.






ಮಾರ್ಗದರ್ಶಕರು
ಡಾ. ಶಿವಾನಂದ ಎಸ್. ವಿರಕ್ತಮಠ
ಪ್ರವಾಚಕರು





ಮಹಿಳಾ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
೨೦೦೮

# ಅಭ್ಯರ್ಥಿಯ ದೃಢೀಕರಣ

**'ಮುಸ್ಲಿ ಮಹಿಳೆಯ ಸಾಮಾಜಿಕ ಬದುಕು'** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ನಾನು **ಡಾ. ಶಿವಾನಂದ ವಿರಕ್ತಮಠ,** ಪ್ರವಾಚಕರು, ಮಹಿಳಾ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ. ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತೇನೆ. ಇದನ್ನು ಈ ಹಿಂದೆ ಯಾವುದೇ ಪದವಿಗಾಗಿ ಬೇರೆ ವಿಶ್ವವಿದ್ಯಾಲಯಕ್ಕೆ ಹಾಗೂ ಇತರೆ ಸಂಘ ಸಂಸ್ಥೆಗಳಿಗೆ ಸಲ್ಲಿಸಿಲ್ಲವೆಂದು ಈ ಮೂಲಕ ನಾನು ದೃಢೀಕರಿಸುತ್ತೇನೆ.

ರಜಿಯಾ ಬಾನು ಕೆ.ಎಸ್.

**ರಜಿಯಾ ಬಾನು ಕೆ.ಎಸ್.**
ಸಂಶೋಧಕಿ
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : 31/10/08
ಸ್ಥಳ : ವಿದ್ಯಾರಣ್ಯ

# ಮಾರ್ಗದರ್ಶಕರ ಪ್ರಮಾಣ ಪತ್ರ

**'ಮುಸ್ಲಿಂ ಮಹಿಳೆಯ ಸಾಮಾಜಿಕ ಬದುಕು'** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು **ರಜಿಯಾ ಬಾನು ಕೆ.ಎಸ್.** ಇವರು ನನ್ನ ಮಾರ್ಗದರ್ಶನದಲ್ಲಿ ಎಂ.ಫಿಲ್. ಪದವಿಗಾಗಿ ಮಹಿಳಾ ಅಧ್ಯಯನ ವಿಭಾಗ ಕನ್ನಡ ವಿಶ್ವವಿದ್ಯಾಲಯ ಹಂಪಿ ವಿದ್ಯಾರಣ್ಯಕ್ಕೆ ಒಪ್ಪಿಸಲು ಸಿದ್ಧಪಡಿಸಿದ್ದಾರೆ. ಇದನ್ನು ಈ ಹಿಂದೆ ಯಾವುದೇ ಪದವಿಗಾಗಿ ಬೇರೆ ವಿಶ್ವವಿದ್ಯಾಲಯಕ್ಕೆ ಹಾಗೂ ಇತರೆ ಸಂಘ ಸಂಸ್ಥೆಗಳಿಗೆ ಸಲ್ಲಿಸಿಲ್ಲವೆಂದು ಈ ಮೂಲಕ ನಾನು ದೃಢೀಕರಿಸುತ್ತೇನೆ.

**ಡಾ.ಶಿವಾನಂದ ಎಸ್. ವಿರಕ್ತಮಠ**
ಪ್ರವಾಚಕರು
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : 31/10/08
ಸ್ಥಳ : ವಿದ್ಯಾರಣ್ಯ

# ಪರಿವಿಡಿ

❐

## ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ ಹಾಗೂ ವೈಧಾನಿಕತೆ

## ಅಧ್ಯಾಯ : ಒಂದು

## ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ ಹಾಗೂ ವೈಧಾನಿಕತೆ

### ೧.೦. ಪ್ರಸ್ತಾವನೆ

ಮಹಿಳೆಯ ವಿಚಾರದಲ್ಲಿ ಕೆಲವು ಪೂರ್ವಗ್ರಹಗಳಿವೆ. ನಿಶ್ಚಿತ ಹಾಗೂ ನಿರ್ದಿಷ್ಟ ಕಲ್ಪನೆಗಳು ಶತಮಾನಗಳಿಂದ ಹರಳುಗೊಂಡಿವೆ. ಸ್ತ್ರೀಯನ್ನು ಉದಾತ್ತಗುಣಗಳ ಗಣಿ, ಸೇವೆಗೆ ಸಂಬಂಧಿಯಾದ ಸ್ವಭಾವಗಳ ಮೂರ್ತರೂಪ ಎಂಬ ಗ್ರಹಿಕೆ ಹೆಪ್ಪುಗಟ್ಟಿ ಸ್ಥಿರವಾಗಿದೆ. ತ್ಯಾಗ ಹಾಗೂ ಸಹನೆಗೆ ಸಂಕೇತವಾಗಿ ಮಹಿಳೆಯನ್ನು ಚಿತ್ರಿಸಲಾಗಿದೆ. ವೇದೋಪನಿಷತ್ತು ಮತ್ತು ಅನಂತರ ಕಾಲದಲ್ಲಿ ಮಹಿಳೆ ಹೇಗೆ ಬಾಳಿದಳು ಎಂಬುದನ್ನು ಕೂಲಂಕುಷವಾಗಿ ಅವಲೋಕಿಸಿದರೆ ಆಕೆ ಈ ಕಾಲಘಟ್ಟಗಳಲ್ಲಿ ನಡೆದುಬಂದ ದಾರಿ ಕರುಣಾಜನಕವಾಗಿದೆ.

''ಮಾಡಿದ ಅಡುಗೆ ಮನೆ ಮುಂದಿಗೆ, ಮಹಿಳೆಗೆ ಒಲೆಯ ಬೂದಿ, ಕಣ್ಣೀರು ಆಕೆಯ ಬಾಳಿನ ಬುತ್ತಿ, ಆಕೆ ಸ್ವತಂತ್ರ ವ್ಯಕ್ತಿಯಲ್ಲ, ಗಂಡು ತಾನು ಹೆಂಗಸಿರದೇ ಇರುವ ಸ್ಥಿತಿಯನ್ನು ಕಲ್ಪಿಸಿಕೊಳ್ಳಬಲ್ಲ. ಹೆಣ್ಣಿನ ಅಸ್ತಿತ್ವ ಗಂಡಸಿನ ಅಪ್ಪಣೆಯಲ್ಲಿದೆ. ಆದ್ದರಿಂದಲೇ ಆಕೆಯನ್ನು ಲೈಂಗಿಕತೆ ಎನ್ನಲಾಗಿದೆ. ಅಂದರೆ ಆಕೆ ಕಾಮದ ಮುದ್ದೆ ಮಾತ್ರ. ಶುದ್ಧಾಂಗವಾಗಿ ಕಾಮ. ಇಲ್ಲಿ ಆಕೆಯನ್ನು ವ್ಯಾಖ್ಯಾನಿಸಿರುವುದು ಗಂಡಸಿಗೆ ಸಂಬಂಧಿಸಿದಂತೆ ಮಾತ್ರ. ಆಕೆಯ ಸ್ವಂತಕ್ಕೆ ಸಂಬಂಧಿಸಿದಂತೆ ಅಲ್ಲ. ಆಕೆ ಒಂದು ಆಕಸ್ಮಿಕ ಅಷ್ಟೇ. ಅತ್ಯಗತ್ಯಕ್ಕೆ ಸಂಬಂಧಿಸಿದಂತೆ ಅಸ್ತಿತ್ವದಲ್ಲಿರುವ ಒಂದು ಅನಗತ್ಯ ಆಕೆ, ಆತನೆ ಕರ್ತೃ, ಆತನೇ ಅತ್ಯಂತಿಕ ಶಕ್ತಿ ಆಕೆ ಏನಿದ್ದರೂ ಅನ್ಯ''[೧]

ಹೆಣ್ಣಿನ ಅಸ್ತಿತ್ವವನ್ನು ಗಂಡು ಸಂತಾನೋತ್ಪತ್ತಿಯ ನೆಲೆಯಲ್ಲಿ ಮಾತ್ರ ಗೌರವಿಸುವ, ಗ್ರಹಿಸುವ ಆಕೆ ಪುರುಷಾಧಿಕಾರಕ್ಕೆ ವಿಧೇಯಳಾಗಿರುವುದನ್ನೇ ಆದರ್ಶಿಕರಿಸಲಾಗಿದೆ. ಪತಿ ಸತ್ತರೆ, ನಿಷ್ಪಾಪ ಕನ್ಯೆಯರಿಗೆ ವೈದವ್ಯದ ನರಕ ಶಿಕ್ಷೆ ತಪ್ಪಿದಲ್ಲ. ಮಾತೃ ಪ್ರಧಾನ ವ್ಯವಸ್ಥೆಗಿಂತ ಪಿತೃ ವ್ಯವಸ್ಥೆಗೆ ಕೌಟುಂಬಿಕ ವ್ಯವಹಾರದಲ್ಲಿ, ಸಾಮಾಜಿಕ ಪರಿಸರದಲ್ಲಿ ಹೆಣ್ಣಿಗೆ ಸಂದ ಸ್ಥಾನಮಾನಗಳು ಗೌಣ ಸ್ವರೂಪದ್ದಾಗಿವೆ.

ಒಟ್ಟಾರೆ ಪುರುಷ ಕೇಂದ್ರಿತ ವ್ಯವಸ್ಥೆಯು ದುರ್ಬಲರನ್ನು ಅಧೀನ ನೆಲೆಗೆ ತಳ್ಳಿದ ಸ್ವಾರ್ಥ ಕೇಂದ್ರಿತ ಧೋರಣೆಗೆ ಹಲವು ಮಾದರಿಗಳಿವೆ.

ಪುರುಷ ನಿರ್ಮಿತ ಸಮಾಜದಲ್ಲಿ ಈಗಾಗಲೇ ಒಪ್ಪಿಸಲಾಗಿರುವ ಹಲವು ಸಂಹಿತೆಗಳು ಚಾರಿಯಲ್ಲಿವೆ. ಹಾಗೆ ಪರಂಪರಾಗತವಾಗಿ ಅರ್ಥಾತ್ ರಕ್ತಗತವಾಗಿ ರೂಢಿಸಿಕೊಂಡ ಮಹಿಳೆ ಅವಳ ಬದುಕಿಗೆ ಸ್ವಾತಂತ್ರ್ಯಕ್ಕೆ ನಿರ್ಮಿತಗೊಂಡ ಒಂದು ಮಿತಿಯಲ್ಲಿ ಅದು ನಿರ್ಬಂಧವಲ್ಲ ಎಂಬ ತೋರಿಕೆಯ ವಾತಾವರಣವಿದ್ದರೂ ನಿರ್ಬಂಧ ಶಬ್ದಕ್ಕಿಂತಲೂ ಹೆಚ್ಚಿನ ಮಾನಸಿಕ ಒಪ್ಪಂದ ಒಗ್ಗುವಿಕೆ ಇರುವುದರಿಂದ ತನ್ನ ಬದುಕನ್ನು ಸುತ್ತಲ ವಾತಾವರಣಕ್ಕೆ ಸಮಾಜಕ್ಕೆ ಬೇರೆಯದೇ ಆದ ರೀತಿಯಲ್ಲಿ ರೂಢಿಸಿಕೊಂಡಿರುತ್ತಾಳೆ.

''ಇಂಥಹ ಒಂದು 'ಅಧೀನ ಭಾವ'ದಿಂದಲೇ ವಿಕಸಿತವಾಗುವಾಗ ಸ್ವೀಕರಿಸುವ ಮೌಲ್ಯಗಳೂ ಸಹ ಕೊಡಮಾಡಲ್ಪಟ್ಟಿದ್ದು ಬಂದಾಗ 'ಪ್ರಜ್ಞೆ' ಸಹ ಸ್ವಯಂ ವಿಕಸಿತವಾಗದ ಬೆಳೆಯದ ಒಂದು ಸ್ವೀಕೃತ ಕ್ರಿಯೆ ಮಾತ್ರ ಆಗುತ್ತದೆ. ಹೀಗಾದಾಗ ಸಾಮಾಜಿಕ ಪರಿಸರಕ್ಕೆ ಸಂಬಂಧ ಗಂಟು ಹಾಕಿ ರಚಿಸಿದ ಅನೇಕ ಪ್ರಯತ್ನಗಳು ಕೇವಲ ವರದಿಯಾಗಿ (ಕೇಸ್ ಹಿಸ್ಟರಿಗಳಾಗಿ) ತೋರೆಣಿಕೆಯ ಕಳಕಳಿ ಮಾತ್ರ ಆಗಿ ಉಳಿಯುವುದೇ ಹೆಚ್ಚು ಬುದ್ಧಿ ಗ್ರಾಹತ್ಯೆಗೂ ಅನುಭವದ ಆಳಕ್ಕೆ ಇಳಿಯುವಾಗಿನ ಸಂವಹನೆಗೂ ಬಹಳಷ್ಟು ಅಂತರ ಇರುತ್ತದೆ.[೨]

ಮಹಿಳೆಯ ದೃಷ್ಟಿಯಿಂದ ಸಹ ಉತ್ಪಾದನೆಯ ಹಂಚಿಕೆಯ ಕ್ರಮಗಳು ಈ ಮೂಲಕ ಉಂಟಾಗುವ ಹಿತಾಸಕ್ತಿಗಳು ಪ್ರಜ್ಞೆಯನ್ನು ನಿಯಂತ್ರಿಸುತ್ತವೆ. ಎಂಬ ಮಾತೂ ಅಷ್ಟೇ ಸತ್ಯ. ಈ ನೆಲೆಗಟ್ಟಿನಲ್ಲಿ ನಿಂತು ಮಾತನಾಡುವಾಗ ಮಹಿಳೆಯ ಯಾವ ಅನುಭವ, ವಿಚಾರ, ಭಾವನೆಗಳಿಗೆ ಆಕೆ ನಿಂತಿರುವ ಸಮಾಜದಲ್ಲಿ ಮನ್ನಣೆ ಇಲ್ಲವೋ ಆಕೆ ತನ್ನಂತೆ ಅಭಿವ್ಯಕ್ತಿಗೆ ಲಕ್ಷ್ಮಣ ರೇಖೆ ಹಾಕಿಕೊಳ್ಳಬೇಕಾಗುತ್ತದೆ. ಹೀಗೆ ಪ್ರಜ್ಞೆ ಹಾಗೂ ಅದರ ಹುಟ್ಟು ಸ್ಥಿತಿಗೆ ಕಾರಣವಾಗುವ ಸಮಾಜ ಯಾವುದೇ ಇರಲಿ ಅಂತಹ ಸಮಾಜದ ಅಂಗವಾಗಿ ಬದುಕುವ ಹೆಣ್ಣು ತನ್ನ ವ್ಯಕ್ತಿ ಪ್ರಜ್ಞೆಗಿಂತ ಹೆಚ್ಚಾಗಿ ಅಂಥ ಪ್ರಜ್ಞೆಯನ್ನು ನಿಯಂತ್ರಿಸುವ ಚಾಲಕ ಶಕ್ತಿಯನ್ನು ಅರ್ಥಾತ್ ಪುರುಷ ಪ್ರಧಾನ ಸಮಾಜವನ್ನು ಮೀರಿ ನಿಲ್ಲುವುದು ಕಷ್ಟವಾಗುತ್ತದೆ. ಇದು ಇಂಥದೇ ತೊಡಕು ಎಂಬುದನ್ನು ಗುರ್ತಿಸಿಕೊಳ್ಳುವ ಹಂತವನ್ನು ಮೀರಿ ಬೆಳೆದ ಅಧೀನತೆ ಇತ್ಯಾದಿಗಳು ಅಂಥ ಪ್ರಭಾವದಿಂದ ಹೆಣ್ಣನ್ನು ಮುಕ್ತವಾಗಲು ಬಿಡುತ್ತಿಲ್ಲ. ಹಾಗೆ ಮುಕ್ತವಾಗದ ಹೊರತು ಸ್ವತಂತ್ರ ಸ್ಥಿತಿ ಜವಾಬ್ದಾರಿ ಬರುವುದೂ ಅಸಾಧ್ಯವಾಗುತ್ತದೆ.[೩]

ಬದುಕಿನಲ್ಲಿ ಸಮಕಾಲೀನ ಮಹಿಳೆಯರ ಪಾತ್ರಗಳು ಹಾಗೂ ಸ್ಥಾನಗಳನ್ನು ಭಯ ಹುಟ್ಟಿಸುವಂಥ ರೀತಿಯಲ್ಲಿ ಪ್ರಭಾವಿಸುತ್ತಿರುವ ವ್ಯವಸ್ಥೆಗಳಲ್ಲಿ ಧರ್ಮವೂ ಒಂದು ಹೊಸ ಹೊಸ ರೂಪಗಳಲ್ಲಿ ಪ್ರಭಾವಿಸುತ್ತಿರುವ ವ್ಯವಸ್ಥೆಗಳಲ್ಲಿ ಧರ್ಮವೂ ಒಂದು ಹೊಸ ಹೊಸ ರೂಪಗಳಲ್ಲಿ ಹೊಸ ಹೊಸ ರೀತಿಗಳಲ್ಲಿ ಧರ್ಮ ಎನ್ನುವ ವ್ಯವಸ್ಥೆ ಸ್ತ್ರೀ ವಿರೋಧಿ ಸಂಸ್ಕೃತಿಯ ಬೇರುಗಳನ್ನು ಸಮಾಜದ ಎಲ್ಲೆಡೆ ಹರಡುತ್ತಿರುವುದಷ್ಟೇ ಅಲ್ಲದೆ ಧಾರ್ಮಿಕ ಮೂಲಭೂತವಾದವನ್ನು ಸ್ತ್ರೀ ಸ್ವಾಂತತ್ರ್ಯ ಚಳುವಳಿಗೆ ಒಂದು ಬೃಹತ್ ಸವಾಲಾಗಿ ಎಸೆದಿದೆ.

“ಪುರುಷನೇ ಜಾಣನೇನಲ್ಲ ಎಲ್ಲ ಕಾಲದೊಳಗೆ

ಹೆಣ್ಣು ಜಾಣೆಯಾಗಿರುತ್ತಾಳೆ ತುಸು ವೇಗದೊಳಗೆ

ಗಂಡೇ ವಿವೇಕಿಯೇನಲ್ಲ, ಎಲ್ಲ ಕಾಲಗಳಲ್ಲಿ

ಹೆಣ್ಣು ಹಾಗನಿಸುವಳು ಕ್ಷಣಕಾಲ ಚಿಂತಿಸಿದಲ್ಲಿ”[೪] (ಥೇರಿಗಾಥಾ)

ಹೆಣ್ಣಿನ ಬುದ್ಧಿವಿಕಾಸ, ದೈಹಿಕ ಬಲವರ್ಧನೆಯನ್ನು ಈ ಸಮಾಜ ಎಂದೂ ಬಯಸಿಲ್ಲ. ಬುದ್ಧಿ ಬಲಿತರೇ ಪ್ರಶ್ನಿಸಬಲ್ಲಳೆಂದು, ಅಕ್ಷರ ಕಲಿಕೆಯಿಂದಲೂ ದೂರವಿಟ್ಟಿತು. ದೇಹ ಬಲಿತರೆ ಪ್ರತಿಭಟಿಸಿಬಲ್ಲಳೆಂಬ ಭಯದಿಂದ ವ್ರತಾಚಾರಗಳನ್ನು ಹೇಳಿ ಉಪವಾಸಕ್ಕೆ ತೊಡಗಿಸಿತು.

ಹೆಣ್ಣು ಪ್ರತಿಯೊಂದು ಕಾಲಘಟ್ಟಗಳಲ್ಲಿಯೂ ಆಯಾ ಕಾಲಘಟ್ಟದ ಪುರುಷರಿಂದ ಶೋಷಣೆಗೆ ಒಳಗಾಗುತ್ತಲೇ ಬರುತ್ತಿದ್ದಾಳೆ. ಹೆಣ್ಣು ಬುದ್ಧಿವಂತಳಾಗಬಾರದೆಂದು ಶಿಕ್ಷಣದಿಂದ ದೂರವಿಟ್ಟ ಸಂಗತಿ ಸತ್ಯವೇ ಆಗಿದ್ದು, ಸಮಾಜ ಸುಧಾರಕರ ಪ್ರಬಲ ಹೋರಾಟದಿಂದ ಹೆಣ್ಣಿಗೂ ಕೂಡ ಶಿಕ್ಷಣ ಲಭಿಸುವಂತಾಯಿತು. ಆದರೂ ಕೂಡ ಶೋಷಣೆಯು ನಿರಂತರವಾಗಿ ನಡೆಯುತ್ತಲೇ ಬರುತ್ತಿದೆ.

ಇತಿಹಾಸದುದ್ದಕ್ಕೂ ವಿವಿಧ ಧರ್ಮ, ಸಮಾಜಗಳ ವ್ಯವಸ್ಥೆಯಲ್ಲಿ ಮಹಿಳೆಯರ ಸ್ಥಿತಿಗತಿ ಇದೇ ಆಗಿದೆ. ಆಕೆಗೆ ಸಿಕ್ಕಿದ್ದೂ ಮನೆಯೊಳಗಿನ ಉಸ್ತುವಾರಿ ಅವಳೇನಿದ್ದರೂ ಮನೆಯ ನಾಲ್ಕು ಗೋಡೆಗಳ ಮಧ್ಯೆ ಇದ್ದು, “ಗೃಹಿಣಿ ಗೃಹಮುಚ್ಯತೇ” (ಗೃಹವನ್ನು ಮಾಡುವುದು ಕಟ್ಟಡವಲ್ಲ, ಅದನ್ನು ಮಾಡುವುದು ಗೃಹಿಣಿ ಎಂದು ಸ್ಮೃತಿಕಾರರೊಬ್ಬರು ಹೇಳುವರು ಇದು ಎಷ್ಟು ನಿಜ! ಬಿಸಿಲು, ಮಳೆ, ಚಳಿಯಿಂದ ನಮ್ಮನ್ನು ಸಂರಕ್ಷಿಸಲ್ಪಡುವ ಮೇಲ್ಛಾವಣೆಯನ್ನು, ಅದನ್ನು ಹೊತ್ತಿರುವ ಕಂಬಗಳಿಂದ ಅಳೆಯಲಾಗುವುದಿಲ್ಲ ಆದರೆ ಅದಕ್ಕೆ ನಿಜವಾಗಿಯೂ ಕೇಂದ್ರವಾದ ಆಧ್ಯಾತ್ಮಿಕ ಸ್ತಂಭದಂತಿರುವ ಮನೆಯ ರಕ್ಷಕಳಾದ ಸ್ತ್ರೀ ಸ್ಥಾನದಿಂದ ಇದನ್ನು ಅಳೆಯಬೇಕು). ಎನ್ನುವಂತೆ ತನ್ನ ಗೃಹಿಣಿತ್ವದ ಪಾಲನೆಯನ್ನು ಮಾಡಿಕೊಂಡು ಹೋಗಬೇಕೆಂದು ಪುರುಷ ಪ್ರಧಾನ ವ್ಯವಸ್ಥೆ ಸದಾ ಬಯಸುತ್ತಲೇ ಬಂದಿದೆ. ಇಷ್ಟೇ ಅಲ್ಲದೆ ಅವಳ ಕೆಲಸ ಎಂದಿಗೂ ಗಂಡು ಮಾಡುವ ಕೆಲಸಕ್ಕೆ ಸಮಾನವಾಗಿರುವುದಿಲ್ಲವೆಂಬ ಪೂರ್ವಾಗ್ರಹಪೀಡಿತ ಅಭಿಪ್ರಾಯವಿರುವುದರಿಂದ ಅವಳ ದುಡಿಮೆಯನ್ನು ಉತ್ಪಾದಕತೆಯಿಂದ ದೂರವೇ ಇಡಲಾಗಿದೆ.[೫]

ಭಾರತ ಅನೇಕ ಧರ್ಮ, ಪಂಥ, ಜಾತಿಗಳಿಂದ ಕೂಡಿದ ದೇಶವಾಗಿದೆ. ಇಲ್ಲಿ ಧರ್ಮ, ಪ್ರದೇಶ, ಕುಲ ಆಧಾರಗಳ ಮೇಲೆ ಸಾಂಸ್ಕೃತಿಕ ವೈಶಿಷ್ಟ್ಯಗಳನ್ನು ಗುರ್ತಿಸಲಾಗುತ್ತದೆ. ಇವುಗಳಲ್ಲಿ ಧರ್ಮ ಸರಿಯಾದ ಸೂಚನೆ ಕೊಡುವುದಿಲ್ಲ. ಒಂದು ನಿರ್ದಿಷ್ಟ ಧರ್ಮವನ್ನು ಅನುಸರಿಸುವವರ ನಂಬಿಕೆ, ಪೂಜಾ ವಿಧಾನಗಳು ಮತ್ತು ಆಚರಣೆಗಳು ಇವುಗಳ ಹೊರತು ಬೇರಾವುದೂ ಸಮನಾಂಶ ಅವುಗಳಲ್ಲಿ ಇಲ್ಲ. ಪೂಜಾ ವಿಧಾನ ಹಾಗೂ ಆಚರಣೆಗಳಲ್ಲಿ ಕೂಡಾ ಪಂಥೀಯ ಹಾಗೂ ಪ್ರಾದೇಶಿಕ ಭಿನ್ನತೆಗಳುಂಟು. ಈ ಭಿನ್ನತೆಗಳಿರುವುದರಿಂದಾಗಿ ಅನೇಕ ಧರ್ಮ, ಜಾತಿ, ಉಪಜಾತಿಗಳಿಂದಾಗಿರುವುದರಿಂದ ವಿವಿಧತೆಯಲ್ಲಿ ಏಕತೆ ಎಂಬ ಅಂಶ ಕೇವಲ ಮೇಲ್ನೋಟಕ್ಕೆ ಮಾತ್ರ ಸರಿ ಎನಿಸುತ್ತದೆ.

ಇದು ಭಾರತ ದೇಶದಲ್ಲಿರುವ ವೈವಿಧ್ಯತೆ, ತಾರತಮ್ಯತೆಗೆ ಹಿಡಿದ ಕನ್ನಡಿಯಾದರೆ, ಇನ್ನೂ ಸ್ತ್ರೀ ಪುರುಷರ ವಿಷಯಕ್ಕೆ ಬಂದಾಗ ಅಲ್ಲಿಯೂ ಕೂಡ ಈ ತಾರತಮ್ಯವನ್ನು ಕಾಣುತ್ತೇವೆ. ಪುರುಷ ಶ್ರೇಷ್ಠನು ಮಹಿಳೆ ಕನಿಷ್ಠಳು ಎನ್ನುವ ಧೋರಣೆ ಇಲ್ಲಿ ಬೇರೂರಿ ಬಿಟ್ಟಿದೆ.

**೧.೧. ಅಧ್ಯಯನದ ಉದ್ದೇಶ**

ಮುಸ್ಲಿಂ ಮಹಿಳೆಯರನ್ನು ಸಾಮಾಜಿಕ, ಧಾರ್ಮಿಕ ಹಾಗೂ ಆರ್ಥಿಕ ರಂಗದಿಂದ ದೂರ ಸರಿಸಿದ ಪುರುಷ ನಿಷ್ಠ ಚಿಂತನೆಗಳು ಹೆಣ್ಣಿನ ವ್ಯಕ್ತಿತ್ವವನ್ನು ಸ್ತ್ರೀತ್ವದ ಸ್ವರೂಪವನ್ನು ನೇತಾತ್ಮಕವಾಗಿಯೇ ವ್ಯಾಖ್ಯಾನಿಸಿದ ರೀತಿ ಆಶ್ಚರ್ಯಕಾರಿಯಾಗಿವೆ. ಅಷ್ಟೇ ಅವಾಸ್ತವವಾಗಿವೆ ಎಂಬುದನ್ನು ಉದ್ದೇಶವನ್ನಿಟ್ಟುಕೊಳ್ಳಲಾಗಿದೆ.

ಮುಸ್ಲಿಂ ಸಮುದಾಯದಲ್ಲಿ ಮಹಿಳೆಯರು ಎಷ್ಟರ ಮಟ್ಟಿಗೆ ಶಿಕ್ಷಣ, (ಸ್ವತಂತ್ರ)ವನ್ನು ಪಡೆದುಕೊಂಡಿದ್ದಾರೆ, ಮಹಿಳೆಯರಿಗೆ ಯಾವ ಪ್ರಮಾಣದಲ್ಲಿ ಶಿಕ್ಷಣ ದೊರೆತಿದೆ. ಎಂತಹ ಶಿಕ್ಷಣ ದೊರೆತಿದೆ ಇಲ್ಲವೇ ಶಿಕ್ಷಣವು ಬಹುಪಾಲು ಮುಸ್ಲಿಂ ಮಹಿಳೆಯರಿಗೆ ಏಕೆ ಗಗನ ಕುಸುಮವಾಗಿದೆ ಎನ್ನುವುದನ್ನು ಚರ್ಚಿಸುವ ತುರ್ತಿದೆ.

ಧರ್ಮದೊಳಗಿನ ಲಿಂಗ ತಾರತಮ್ಯವನ್ನು ಗುರ್ತಿಸಲಾಗಿದೆ ಮತ್ತು ಲಿಂಗ ವ್ಯತ್ಯಾಸಗಳು ಧರ್ಮಗಳಿಗನುಗುಣವಾಗಿ ಹೇಗೆ ಭಿನ್ನವಾಗಿರುತ್ತದೆ ಎಂಬ ಕಾರಣಗಳನ್ನು ಕ್ಷೇತ್ರಕಾರ್ಯದ ಮೂಲಕ ಕಂಡುಕೊಳ್ಳಲು ಉದ್ದೇಶಿಸಲಾಗಿದೆ.

ಧರ್ಮದಲ್ಲಿನ ಪಿತೃ ಪ್ರಧಾನ ಮೌಲ್ಯಗಳು ಶಿಕ್ಷಣದ ಹಂತದಲ್ಲಿಯೂ ಪ್ರಧಾನ ಪಾತ್ರವಹಿಸುತ್ತವೆ. ಮಹಿಳೆಯರ ಶಿಕ್ಷಣ ಕುರಿತು ವಸಾಹಾತುಶಾಹಿ ತಂದ ಹೊಸ ಗಾಳಿಯು ಭಾರತದಲ್ಲಿ ಸ್ವಾತಂತ್ರ್ಯ ನಂತರದಲ್ಲೂ ಮುಂದುವರೆಯುತ್ತಾದರೂ ಅದು ಏಕೆ ಮುಸ್ಲಿಂ ಮಹಿಳೆಯರ ಪಾಲಿಗೆ ಮರೀಚಿಕೆಯಾಗಿಯೇ ಉಳಿಯಿತು ಎನ್ನುವುದನ್ನು ವಿಶ್ಲೇಷಿಸುವ ಉದ್ದೇಶವನ್ನು ಹೊಂದಿದೆ.

ಇದಕ್ಕೆ ಧರ್ಮದಲ್ಲಿನ ಪಿತೃಪ್ರಧಾನ ಮೌಲ್ಯಗಳ ಪ್ರಾಬಲ್ಯವೇ ಕಾರಣ ಎನ್ನುವುದನ್ನು ಚರ್ಚಿಸುವ ಅಗತ್ಯವಿದೆ. ಶಿಕ್ಷಣದಲ್ಲಿ ಲಿಂಗ ವ್ಯತ್ಯಾಸಗಳು ಏಕೆ ಇವೆ. ಮುಸ್ಲಿಂ ಮಹಿಳೆಯರ ಶೈಕ್ಷಣಿಕ, ಪ್ರಗತಿಗಾಗಿ ಗೊಡ್ಡು ಕಾರ್ಯಚರಣೆಗಳ ನಿರ್ಮೂಲನೆಗೆ ಅಗತ್ಯವಾದ ಆಲೋಚನೆಯನ್ನು ಮಾಡಬೇಕಾಗಿದೆ.

ಹಾಗೆಯೇ ಇಸ್ಲಾಂ ಧರ್ಮದಲ್ಲಿ ಮಹಿಳೆಯನ್ನು ಜೈವಿಕತೆಯ ಜೊತೆಗೆ ವಿವಾಹದ ಮೂಲಕ ಯಾವ ರೀತಿ ಹೇಳುತ್ತದೆ. ಇದರಿಂದ ಮುಸ್ಲಿಂ ಮಹಿಳೆಯ ಸಾಮಾಜಿಕ ಸ್ಥಿತಿ ಗತಿಯ ಮೇಲೆ ಯಾವ ರೀತಿಯ ಪರಿಣಾಮ ಬೀರಿವೆ ಎಂಬುದನ್ನು ಉದ್ದೇಶವನ್ನಾಗಿಟ್ಟುಕೊಳ್ಳಲಾಗಿದೆ.

ಇಸ್ಲಾಂ ಧರ್ಮದಲ್ಲಿಯ ಆಚರಣೆಗಳು, ಕಾನೂನುಗಳು ನೈತಿಕತೆ, ಪ್ರವೃತ್ತಿ ಇವೆಲ್ಲವೂ ಪುರುಷಪರವಾಗಿದ್ದು, ಪುರುಷ ಪ್ರಾಧಾನ್ಯತೆಯನ್ನು ಹೇಳುತ್ತವೆಯೇ ಅಥವಾ ಇಲ್ಲಿನ ಧಾರ್ಮಿಕ ಸಂಗತಿಗಳು ಲಿಂಗ ಸಮಾನತೆಯನ್ನು ಹೇಳುತ್ತವೆಯೆ ಅಥವಾ ಮಹಿಳೆಗೆ ಮಾನ್ಯತೆಯನ್ನು ನೀಡಿವೆಯೇ ಎಂಬುದನ್ನು ವಿಶ್ಲೇಷಿಸುವುದೇ ನನ್ನ ಅಧ್ಯಯನದ ಉದ್ದೇಶವಾಗಿದೆ.

೧. ಮುಸ್ಲಿಂ ಮಹಿಳೆಯು ಕುಟುಂಬ ಮತ್ತು ಸಮಾಜದಲ್ಲಿ ಅಸಮಾನತೆಯ, ತಾರತಮ್ಯದ ನೆಲೆಯಲ್ಲಿ ಬದುಕುತ್ತಿದ್ದಾಳೆ. ಮಹಿಳೆಯರಿಗಿರುವ ಸ್ಥಾನಮಾನ ಗೌಣವಾಗುತ್ತಿದೆ. ಈ ಗೌಣತೆಗೆ ಪ್ರಧಾನವಾಗಿರುವಂತಹ ಕಾರಣವಾಗಿರುವ ಅಂಶಗಳನ್ನು ಗುರುತಿಸುವುದು.

೨. ಮುಸ್ಲಿಂ ಮಹಿಳೆಯರಿಗೆ ಸನಾತನ ಕಾಲದಿಂದಲೂ ಪರದಾ ನಿಯಂತ್ರಣದಲ್ಲಿರುವುದರಿಂದ ಆಕೆಯು ಹೊರ ಪ್ರಪಂಚಕ್ಕೆ ಪ್ರವೇಶಿಸದ ಹಾಗೆ ಮಾಡಿರುವ ಸಾಮಾಜಿಕ, ಧಾರ್ಮಿಕ ನಿರ್ಬಂಧನೆಗಳನ್ನು ಹಾಗೂ ಅದರ ಮೂಲವನ್ನು ಕಂಡುಕೊಳ್ಳುವುದು.

೩. ಮುಸ್ಲಿಂ ಮಹಿಳೆಗೆ ಔಪಚಾರಿಕ ಶಿಕ್ಷಣದ ಬಗ್ಗೆ ಸಡಿಲಿಕೆ ನೀಡದೆ ಇರುವುದರ ಬಗ್ಗೆ ತಿಳಿದುಕೊಳ್ಳುವುದು.

೪. ವೈವಾಹಿಕ ಪದ್ಧತಿಗಳು ಹಾಗೂ ವಿಚ್ಛೇದನಕ್ಕೆ ಒಳಗಾದ ಮಹಿಳೆಯರ ಧಾರುಣ ಸ್ಥಿತಿ-ಗತಿಯನ್ನು ತಿಳಿಯುವುದು.

೫. ಮುಸ್ಲಿಂ ಮಹಿಳೆಯು ಧರ್ಮ, ಸಂಪ್ರದಾಯಗಳು, ಆಚರಣೆಗಳು ಹಾಗೂ ನಂಬಿಕೆಗಳ ಹೆಸರಿನಲ್ಲಿ ಪುರುಷ ಪ್ರಧಾನ ಮೌಲ್ಯಗಳಿಗೆ ಬದ್ಧಳಾಗಿರುವುದರ ಬಗ್ಗೆ ತಿಳಿದುಕೊಳ್ಳುವುದು.

೬. ಮುಸ್ಲಿಂ ಮಹಿಳೆ ಎಲ್ಲಾ ರಚನೆಗಳಲ್ಲಿ ಅವಿದ್ಯಾವಂತಳು. ಈ ಮಹಿಳೆಯ ಬದುಕನ್ನು ಬದಲಾಯಿಸದ ಧರ್ಮದ ಮೌಲ್ಯಗಳನ್ನು ಕುರಿತು ಅಧ್ಯಯನ ಮಾಡುವ ಉದ್ದೇಶವನ್ನು ಇಟ್ಟುಕೊಳ್ಳಲಾಗಿದೆ.

### ೧.೨. ಅಧ್ಯಯನದ ವ್ಯಾಪ್ತಿ

ಸ್ಥೂಲವಾಗಿ ಮುಸ್ಲಿಂ ಹೆಣ್ಮಿನ ಬಗೆಗಿನ ಧಾರ್ಮಿಕ, ಸಾಮಾಜಿಕ ಹಾಗೂ ಲಿಂಗ ತಾರತಮ್ಯ ನೆಲೆಯ ವ್ಯಾಪ್ತಿಯನ್ನು ಕುರಿತು ಈ ಅಧ್ಯಯನದಲ್ಲಿ ಪರಿಗಣಿಸಲಾಗಿದೆ. ವಿಶೇಷವಾಗಿ ತಾರತಮ್ಯತೆ, ಅಸಮಾನತೆ, ಧಾರ್ಮಿಕ ಸಂಪ್ರದಾಯಗಳು, ಸಂಸ್ಕಾರಗಳು, ಸಾಮಾಜಿಕ ಸ್ಥಿತಿ-ಗತಿಯನ್ನು, ಸಾಮಾಜಿಕ ಹಿನ್ನೆಲೆಯಲ್ಲಿ ಅವಲೋಕಿಸಿ ಹೇಗೆ, ಮತ್ತು ಇದಕ್ಕೆ (ಸಾಮಾಜಿಕ ಸ್ಥಿತಿಗತಿಗೆ) ಪೂರಕ ವಿಷಯಗಳಾದ ಕುಟುಂಬ, ಶಿಕ್ಷಣ, ಮತ್ತು ಸ್ಥಾನ-ಮಾನಗಳನ್ನು ಕೂಡ ಪರಿಶೀಲಿಸಲಾಗಿದೆ.

ಪುರುಷ ಮತ್ತು ಧಾರ್ಮಿಕ, ಸಾಮಾಜಿಕ ಪರಿಕಲ್ಪನೆಯಲ್ಲೂ ಹೆಣ್ಣು ಗಂಡಿನ ತಾರತಮ್ಯದ ಪುರುಷ ಮನಸ್ಸನ್ನು ಗಮನಿಸಲಾಗಿದ್ದು ಈ ವಿಶಾಲವಾದ ಚೌಕಟ್ಟನ್ನು ತಾತ್ವಿಕವಾಗಿ ನಿರ್ವಚಿಸಲಾಗಿದೆ. ಸಾಮಾಜಿಕವಾಗಿ ಹೆಣ್ಣು ಗಂಡಿನ ಧಾರ್ಮಿಕ, ಸಾಂಪ್ರದಾಯಿಕ ವ್ಯಾಪಾರವನ್ನು ಇಲ್ಲಿ ಗಮನಿಸಲಾಗಿದ್ದು, ಇಂತಹ ದೊಡ್ಡ ವ್ಯಾಪ್ತಿಯ ವಿಷಯದ ಮೂಲ ಬೇರುಗಳಾದ ಲಿಂಗ ಶೋಷಣೆ, ಜಾತಿ ಶೋಷಣೆ ಹಾಗೂ ಸಾಮಾಜಿಕ ಶಾಪಗಳನ್ನು ಗ್ರಹಿಸಲಾಗಿದೆ.

ಸಾರ್ವತ್ರಿಕವಾದ ಇಂತಹ ವಿಶಾಲ ವಿಷಯದ ಶೋಷಣೆಯ ಜಾಡನ್ನು ವಿಶ್ಲೇಷಿಸುವುದೇ ಇಲ್ಲಿ ಮುಖ್ಯ ಗಮನವಾಗಿದೆ. ಸ್ಥಳೀಯವಾದ ವಿವರಗಳ ಮೂಲಕವೇ ಜಾಗತಿಕವಾದ ಅಭಿಪ್ರಾಯಗಳನ್ನು ಜೊತೆ-ಜೊತೆಗೆ ಅನುಸಂಧಾನ ಮಾಡಲಾಗಿದೆ. ಆದ್ದರಿಂದ ಮುಸ್ಲಿಂ ಮಹಿಳೆಯರ ಬಗೆಗಿನ ಒಟ್ಟು ವಿಶ್ಲೇಷಣೆಯನ್ನು ಕೂಡ

ಅಧ್ಯಯನದ ವ್ಯಾಪ್ತಿಗೆ ಅಳವಡಿಸಿಕೊಳ್ಳಲಾಗಿದೆ.ಅಲ್ಲದೆ ಪುರುಷ ಸಮಾಜದ ಸ್ವಭಾವ ಮತ್ತು ಧಾರ್ಮಿಕ ಪ್ರಭುತ್ವದ ದಬ್ಬಾಳಿಕೆಯನ್ನು ವಿಷಯದ ಕೇಂದ್ರದಲ್ಲಿ ಸಂಯೋಜಿಸಲಾಗಿದೆ.

ಮುಸ್ಲಿಂ ಮಹಿಳೆಯ ಬಗೆಗಿನ ವಿಶೇಷವಾದ ಗಮನವನ್ನು ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ ಕಾರಣಗಳಿಂದ ನೀಡಬೇಕಾಗಿರುವುದು ಮುಖ್ಯವಾಗಿದೆ. ಹೆಣ್ಣಿನ ಬಗ್ಗೆ ಧರ್ಮ ಮತ್ತು ಸಂಸ್ಕೃತಿಯು ವಿಶಾಲ ಹರವಿನಲ್ಲಿ ಅನೇಕ ನಂಬಿಕೆಗಳಿವೆ. ಕೆಲವು ನಂಬಿಕೆಗಳಿಗೆ ನೈಸರ್ಗಿಕ ಶಕ್ತಿಯ ಆಧಾರವಿದ್ದರೆ ಹಲವು ಮತ್ತೆಷ್ಟೋ ಸಂಗತಿಗಳಿಗೆ ಇಲ್ಲಿಯೂ ಸಹ ಪುರುಷರ ಪೂರ್ವಾಗ್ರಹಗಳೂ ನೆಲೆಯಾಗಿವೆ.

ಲಿಂಗ ಸಂಬಂಧವನ್ನು ಮುಸ್ಲಿಂ ಸಂಸ್ಕೃತಿಯಲಿಯೂ ಪುರುಷ ಸಮಾಜ ನಿರ್ಧರಿಸಿದೆ. ಹೆಣ್ಣಿನ ಜೈವಿಕ ಗುಣಗಳು ಆಕೆಯ ದೇಹವನ್ನು ರೂಪಿಸಿದ್ದು, ಒಂದು ಕಡೆಗಿದ್ದರೆ, ಅದರ ಬಗ್ಗೆ ಪುರುಷರು ತೀರ್ಮಾನಿಸಿ, ಸಾಂಪ್ರದಾಯಿಕ ಆಚರಣೆಗಳ ಕಾರ್ಯರೂಪದ ಮುಖಾಂತರ ಆರೋಪಿಸಿದ ಅಂಶಗಳು ಮತ್ತೊಂದು ಕಡೆಗಿವೆ.

ಮುಸ್ಲಿಂ ಮಹಿಳೆಯ ಬಗ್ಗೆ ಮುಸ್ಲಿಂ ಸಂಸ್ಕೃತಿಯು ಯಾವ ಬಗೆಯ ಮೌಲ್ಯ ವ್ಯವಸ್ಥೆಯನ್ನು ರೂಪಿಸಿದೆ ಎಂಬುದನ್ನು ಸ್ಥಳೀಯ ವಿವರಗಳಿಂದ ಪರಿಶೀಲಿಸಲಾಗಿದೆ.

ಮುಸ್ಲಿಂ ಮಹಿಳೆಯ ಬಗ್ಗೆ ಅಧ್ಯಯನ ಸಂದರ್ಭದಲ್ಲಿ ಮುಖ್ಯವಾಗಿ ಈಗಾಗಲೇ ನಡೆದ ಸಮುದಾಯ ಅಧ್ಯಯನಗಳ ಮಾಹಿತಿಯನ್ನು ಬಳಸಿಕೊಳ್ಳಲಾಗಿದೆ. ಅಧ್ಯಯನದ ಅನುಕೂಲಕ್ಕಾಗಿ ಹೊಸಪೇಟೆ ನಗರದ ಮುಸ್ಲಿಂ ನಗರಗಳು, ಮತ್ತು ಮಸೀದಿಗಳಲ್ಲಿ ಮಾತ್ರ ಕ್ಷೇತ್ರಕಾರ್ಯ ಮಾಡಲಾಗಿದ್ದು, ಪ್ರಸ್ತುತ ಸಂಪ್ರಬಂಧದಲ್ಲಿ ಮುಸ್ಲಿಂ ಮಹಿಳೆಯರು, ಹಾಗೂ ಮುಸ್ಲಿಂ ಸಮುದಾಯದಲ್ಲಿನ ಸಾಮಾಜಿಕ, ಧಾರ್ಮಿಕ ನಿಷೇಧಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಈಗಾಗಲೇ ನಡೆದಿರುವ ಸಮುದಾಯ ಅಧ್ಯಯನಗಳಲ್ಲಿನ ಮಾಹಿತಿಗಳನ್ನು ಆಧಾರವಾಗಿ ಬಳಸಿಕೊಂಡಿದ್ದರೂ ವಿಷಯ ಸ್ಪಷ್ಟತೆಗಾಗಿ ಕ್ಷೇತ್ರಕಾರ್ಯದ ಕೆಲವು ಖಚಿತ ಮಾಹಿತಿಗಳನ್ನು ಬಳಸಿಕೋಡಿದ್ದೇನೆ. ಹಾಗೆಯೇ ಕೇವಲ ನಿರ್ದಿಷ್ಟ ಪಡಿಸಿದ ಸಮುದಾಯದ (ಮಹಿಳೆ) ಆಕರವನ್ನು ಮಾತ್ರ ಬಳಸಿಕೊಳ್ಳದೇ ಪೂರಕವಾಗಿ ಅಗತ್ಯವಿದ್ದಲ್ಲಿ ಧಾರ್ಮಿಕತೆಗೆ ಸಂಬಂಧಪಟ್ಟಂತೆ ಮೌಲ್ವಿಗಳನ್ನು ಸಹ ಸಂದರ್ಶಿಸಲಾಗಿದೆ. ಹಾಗೂ ಕೇಳಿ ತಿಳಿದ ಮಾಹಿತಿಯನ್ನು ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ.

ಮುಸ್ಲಿಂ ಮಹಿಳೆಯ ನೋವು, ಸಂಕಟ, ಯಾತನೆಗಳು ಅವಳ ಬದುಕಿನಲ್ಲಿ ಮೌನ ಪ್ರತಿಭಟನೆಯ ಮೂಲಕ ಉಳಿದುಕೊಂಡು ಬಂದಿರುವುದು, ಹಾಗೂ ಆಕೆಗೆ ವಿಧಿಸಲ್ಪಟ್ಟ ಹಲವು ನಿಯಮಗಳು ಹೇಗೆ ಹೊರೆಯಾಗಿವೆ ಎನ್ನುವುದನ್ನು ವಿವರಿಸಲಾಗಿದೆ.

### ೧.೩. ಅಧ್ಯಯನದ ಸ್ವರೂಪ ವಿಶ್ಲೇಷಣೆ

ಪ್ರಸ್ತುತ ಅಧ್ಯಯನವು ವಿವಾಹ ಕೇಂದ್ರಿತ ಅಂಶಗಳಲ್ಲಿ ಒಂದಾಗಿದ್ದು. ಮುಸ್ಲಿಂ ಮಹಿಳೆಯ ಸಾಮಾಜಿಕ ಬದುಕು ಎಂಬ ವಿಷಯವನ್ನು ಸಮಸ್ಯೀಕರಿಸಿಕೊಂಡು ಅದರ ಸುತ್ತ ವಿಶ್ಲೇಷಣೆಯನ್ನು ನಡೆಸುವುದಾಗಿದೆ. ಧಾರ್ಮಿಕ

ಆಚರಣೆಗಳು, ಸಾಮಾಜಿಕ ವ್ಯವಸ್ಥೆಯ ಕುರಿತು ಅಧ್ಯಯನವನ್ನು ಪರಿಶೀಲಿಸಿ ಒಂದು ನಿರ್ದಿಷ್ಟ ಚೌಕಟ್ಟು ಗುರ್ತಿಸಿಕೊಂಡು ಅಧ್ಯಯನವನ್ನು ಕೈಗೊಂಡಿದ್ದೇನೆ. ಪ್ರಸ್ತುತ ಸಂದರ್ಭದಲ್ಲಿ ಮುಸ್ಲಿಂ ಮಹಿಳೆಯ ಒಟ್ಟು ಬದುಕಿನ ಕುರಿತು ಸ್ಪಷ್ಟ ಚಿತ್ರಣ ಈ ಅಧ್ಯಯನದಿಂದ ದೊರೆಯುತ್ತದೆ.

ಧರ್ಮದಲ್ಲಿಯ ಆಚರಣೆಗಳು, ಕಾನೂನುಗಳು ನೈತಿಕತೆ, ಪ್ರವೃತ್ತಿ, ಇವೆಲ್ಲವೂ ಪುರುಷಪರವಾಗಿದ್ದು ಪುರುಷ ಪ್ರಾಧಾನ್ಯತೆಯನ್ನು ಹೇಳುತ್ತವೆಯೇ ಅಥವಾ ಇಲ್ಲಿನ ಧಾರ್ಮಿಕ ಸಂಗತಿಗಳು ಲಿಂಗ ಸಮಾನತೆಯನ್ನು ಹೆಳುತ್ತವೆಯೇ ಅಥವಾ ಮಹಿಳೆಗೆ ಮಾನ್ಯತೆಯನ್ನು ನೀಡಿವೆಯೇ ಎಂಬುವನ್ನು ವಿಶ್ಲೇಷಿಸಲಾಗಿದೆ.

ಮುಸ್ಲಿಂ ಮಹಿಳೆಗೆ ಒದಗಿಸಿರುವ ಮರು ವಿವಾಹ ಆಯ್ಕೆಯೂ ಆಕೆಗೆ ಹೆಚ್ಚಿನ ಸ್ವಾತಂತ್ರ್ಯವನ್ನು ತಂದುಕೊಟ್ಟಿವೆಯೇ ಎನ್ನುವ ಅಭಿಪ್ರಾಯಗಳಿವೆ. ನಿಜಕ್ಕೂ ಈ ಸಂಗತಿಯು ಆಕೆಗೆ ನಂಬಿಕೆಯನ್ನು, ಧೈರ್ಯವನ್ನು, ಬಲವನ್ನು ತಂದುಕೊಡುತ್ತವೆಯೇ ಎಂಬುದನ್ನು ವಿಶ್ಲೇಷಿಸುವ ಅವಶ್ಯಕತೆ ಇದೆ.

ಆಕೆಯ ವಿಚಾರದಲ್ಲಿ ಔದಾರ್ಯ ಪ್ರಕಟವಾದ ನೂರಾರು ಪ್ರಸಂಗಗಳು ಇವೆ. ಇಂಥ ಅಪವಾದಗಳು ಎಷ್ಟೇ ವಿಫಲವಾಗಿದ್ದರೂ, ಅವು ಸಾರ್ವತ್ರಿಕ ನಿಯಮಗಳಾಗಲಾರವು. ಚಾರಿತ್ರಿಕವಾಗಿ ಸಂಭವಿಸಿದ ಸ್ಥಿತ್ಯಂತರಗಳಿದ್ದರೂ ಆಚಾರ, ವಿಚಾರ, ಸಂಚಾರಗಳಲ್ಲಿ ಆಕೆಗೆ ಸ್ವಾತಂತ್ರ್ಯ ಕೊಡದೆ ನಿಯಮಗಳ ಬೇಲಿಕಟ್ಟಿದುಂಟು, ಒಟ್ಟಾರೆಯಾಗಿ ಮಹಿಳೆಯರನ್ನು ಕಠೋರವಾಗಿ ನಡೆಸಿಕೊಂಡಿರುವುದೇ ಹೆಚ್ಚು ಎಂಬುದು ತಿಳಿಯುತ್ತದೆ.

### ೧.೪. ಅಧ್ಯಯನದ ವೈಧಾನಿಕತೆ

ಸಂಶೋಧನೆಯ ವಿಷಯಕ್ಕೆ (ಶೀರ್ಷಿಕೆ) ''ಮುಸ್ಲಿಂ ಮಹಿಳೆಯ ಸಾಮಾಜಿಕ ಬದುಕು'' ಎಂಬ ವಿಷಯವನ್ನು ಕೈಗೊಂಡಿದ್ದು, ಮುಸ್ಲಿಂ ಮಹಿಳೆಯರು ಸಾಮಾಜಿಕ, ಧಾರ್ಮಿಕ, ಆಚರಣೆಗಳಲ್ಲಿ ಮಹಿಳೆಯ ಪರಿಗಣನೆ ಕುರಿತು ಸಂಶೋಧನೆಯನ್ನು ಕೈಗೊಳ್ಳುವ ಉದ್ದೇಶದಿಂದ ಈ ವಿಷಯವನ್ನು ಆಯ್ದುಕೊಳ್ಳಲಾಗಿದೆ.

ಮುಸ್ಲಿಂ ಮಹಿಳೆಯ ಬದುಕಿನ ಕುರಿತು ಅಧ್ಯಯನ ಮಾಡುವುದು ಮತ್ತು ಈ ವಲಯದಲ್ಲಿ ಬರುವಂತಹ ಮಹಿಳಾ ಸ್ಥಿತಿ ಗತಿಗಳನ್ನು ಸ್ತ್ರೀವಾದ, ಮಹಿಳಾ ಅಧ್ಯಯನ ಇವುಗಳ ದೃಷ್ಟಿಕೋನದಿಂದ ನಿರ್ದಿಷ್ಟವಾದ ಚೌಕಟ್ಟಿನೊಳಗೆ ಅಧ್ಯಯನವನ್ನು ಕೈಗೊಳ್ಳಬಯಸಿದ್ದೇನೆ.

ಲಿಂಗ ಸಂಬಂಧಿ ತಾರತಮ್ಯದ ಅಧ್ಯಯನಕ್ಕೆ ಹಲವು ಬಗೆಯ ಸಾಧ್ಯತೆಗಳಿವೆ. ಇಲ್ಲಿ ವಿಶೇಷವಾಗಿ ತಾತ್ವಿಕವಾಗಿ ವಿಶ್ಲೇಷಣಾ ಮಾದರಿಯ ಅಧ್ಯಯನದ ಜೊತೆಗೆ ಸಾಮಾಜಿಕ ನ್ಯಾಯದ ಕ್ರಮವನ್ನು ಅನುಸರಿಸಲಾಗಿದೆ. ಬೌದ್ಧಿಕವಾದ ನಿರ್ವಚನ ಕ್ರಮಕ್ಕೆ ಸಮಾಜ ಶಾಸ್ತ್ರೀಯ ಹಾಗೂ ಸಾಂಸ್ಕೃತಿಕ ಆವರಣದ ಅಧ್ಯಯನ ವಿಧಾನಗಳನ್ನು ಅಳವಡಿಸಿಕೊಳ್ಳಲಾಗಿದೆ.

ಸ್ಥಳೀಯ ಸಮಾಜದ ಸಾಮಾಜಿಕ ನ್ಯಾಯದ ಆಶಯವನ್ನು ಅನ್ವಯಿಸಲಾಗಿದೆ. ಕೆಲವೊಮ್ಮೆ ಕ್ಷೇತ್ರಕಾರ್ಯ ವಿಧಾನವನ್ನು ಅನುಸರಿಸಲಾಗಿದೆ. ಒಟ್ಟಿನಲ್ಲಿ ಇಲ್ಲಿ ವಿಶೇಷವಾಗಿ ಸ್ತ್ರೀ ಅಧ್ಯಯನ ವಿಧಾನವೆನ್ನಬಹುದಾದ ಸಾಮಾಜಿಕ ನ್ಯಾಯದ ಕ್ರಮ ಮುಖ್ಯವಾಗಿದೆ. ಇಲ್ಲಿನ ಅಧ್ಯಯನಕ್ಕೆ ಮಹಿಳೆಯಾಗಿ ನಾನು ಧಾರಣ

ಮಾಡಿಕೊಂಡಿರುವ ಸಂಗತಿಗಳೆ ಮುಖ್ಯ ಆಕರಗಳು ಆಗಿವೆ. ಆಕರಗಳನ್ನು ಕೇವಲ ದತ್ತಕವಾಗಿ ತೆಗೆದುಕೊಳ್ಳದೆ ಆ ಎಲ್ಲ ಅಂಶಗಳನ್ನು ಮಹಿಳಾ ಸಮಾಜದ ಸಮೀಕ್ಷೆ ಜೀವನ ದರ್ಶನವಾಗಿ ಭಾವಿಸಲಾಗಿದೆ.

ಹೀಗಾಗಿ ಈ ಅಧ್ಯಯನದಲ್ಲಿ ಸ್ತ್ರೀ ನಿಷ್ಠ ಅಂತೆಯೇ ಮಾನವ ನಿಷ್ಠ ಅಧ್ಯಯನದ ಆಶಯಗಳನ್ನು ಅನುಸರಿಸಲಾಗಿದೆ. ಜೊತೆಗೆ ಪ್ರಗತಿಶೀಲವಾದ ಆಲೋಚನ ವಿಧಾನವನ್ನು ಬರಹದ ಮುಖ್ಯ ಆಶಯವಾಗಿ ಬೆರೆಸಿಕೊಳ್ಳಲಾಗಿದ್ದು, ಇಲ್ಲೆಲ್ಲ ಸ್ತ್ರೀ ಮನಸ್ಸಿನ ಸಮಷ್ಠಿ ಭಾವನೆಯನ್ನೇ ಬಿಂಬಿಸಲಾಗಿದೆ. ಸೃಜನಶೀಲವಾದ ಆಲೋಚನ ಕ್ರಮಗಳನ್ನು ಅಳವಡಿಸಿಕೊಂಡಿರುವ ಕಾರಣ ಇಂತಹ ಅಧ್ಯಯನಕ್ಕೆ ಶುಷ್ಕವಾದ ಅಧ್ಯಯನ ಚೌಕಟ್ಟುಗಳನ್ನು ಅನುಸರಿಸಲು ವಿಶೇಷ ಗಮನ ನೀಡಲಾಗಿಲ್ಲ. ಸ್ವಂತ ಅರಿವು ಸ್ವಂತ ನೆಲೆ, ಸ್ವಂತ ಗ್ರಹಿಕೆಗಳ ಮೂಲಕ ಸಮಾಜದ ಕೊನೆಯ ಮಹಿಳೆಯರ ಆಶಯವನ್ನು ಅಳವಡಿಸಿಕೊಂಡು ಮುಸ್ಲಿಂ ಹೆಣ್ಣಿನ ಮೇಲಿನ ಸಾಮಾಜಿಕ, ಧಾರ್ಮಿಕ, ಹಿಡಿತಗಳನ್ನು ಅಧ್ಯಯನ ಮಾಡಲಾಗಿದೆ.

ನನ್ನ ಸಂಶೋಧನೆಯ ವಿಷಯವಾಗಿರುವ ''ಮುಸ್ಲಿಂ ಮಹಿಳೆಯ ಸಾಮಾಜಿಕ ಬದುಕು'' ಎಂಬ ವಿಷಯವನ್ನು ಸಂಪ್ರಬಂಧದ ಸ್ವರೂಪದಲ್ಲಿ ಮುಂಡಿಸಲು (ಈ ಕೆಳಗಿನ ಸಂಶೋಧನಾ ವಿಧಾನವನ್ನು ಅನುಸರಿಸಲು ಬಯಸಿದ್ದೇನೆ.) ಹಲವಾರು ಸಂಶೋಧನಾ ವಿಧಾನಗಳಿದ್ದರೂ ನನ್ನ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ಕೆಲವೇ ವಿಧಾನಗಳ ಬಗ್ಗೆ ಚರ್ಚಿಸಲಾಗಿದೆ. ಈ ಅಧ್ಯಯನವನ್ನು ಪ್ರಾಯೋಗಿಕ ಅನುಭವದ ಆಧಾರದ ಮೇಲೆ ರೂಪಿಸಲು ಪ್ರಯತ್ನ ಮಾಡಲಾಗಿದೆ.

೧. **ಪ್ರಶ್ನಾವಳಿ:** ಸಂಶೋಧನೆಯ ವಿಷಯಕ್ಕೆ ಸಂಬಂಧಿಸಿದಂತೆ ಮಾಹಿತಿ ಪಡೆಯಲು ಆಯ್ದುಕೊಂಡ ಕ್ಷೇತ್ರದಲ್ಲಿ, ಕ್ಷೇತ್ರದ ಅಧ್ಯಯನದಲ್ಲಿ ಕಾರ್ಯ ಕೈಗೊಂಡಾಗ, ಆ ಕ್ಷೇತ್ರದ ಮಹಿಳೆಯರ ಜೊತೆ ಚರ್ಚೆ ನಡೆಸಲು ಸೂಕ್ತವಾದಂತ ಪ್ರಶ್ನಾವಳಿಯನ್ನು ಸಿದ್ಧಪಡಿಸಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗುವುದು.

ವ್ಯಕ್ತಿಗತ ನಂಬಿಕೆಗಳು, ಮನೋಭಾವನೆಗಳು, ದೃಷ್ಟಿಕೋನ, ವರ್ತನೆಯ ನಮೂನೆಗಳು, ವೈಯುಕ್ತಿಕ ಆಸಕ್ತಿ ಅಭಿರುಚಿ ಹಾಗೂ ಆಯ್ಕೆಗಳು, ಸಮೂಹದ ನಂಬಿಕೆಗಳು, ಆಚರಣೆಗಳು ಮತ್ತು ಅಭ್ಯಾಸಗಳು-ಮುಂತಾದವುಗಳಿಗೆ ಸಂಬಂಧಿಸಿದ ಮಹತ್ವದ ಮಾಹಿತಿಯನ್ನು ಸಂಗ್ರಹಿಸಲು ಪ್ರಶ್ನಾವಳಿಯು ಬಹಳಷ್ಟು ಸಹಾಯಕವಾದದು.

ಕೆಲವೊಂದು ಬಾರಿ ನಿರ್ದಿಷ್ಟವಾದ ಕ್ಷೇತ್ರದಲ್ಲಿ ಅಥವಾ ಕೆಲವು ಸೀಮಿತ ಪ್ರಕರಣಗಳಿಗೆ ಸಂಬಂಧಿಸಿದಂತೆ ಬಹಳ ಆಳವಾದ ಹಾಗೂ ಕೇಂದ್ರಿಕೃತವಾದ ಅಧ್ಯಯನ ಮಾಡುವ ಸಂದರ್ಭದಲ್ಲಿ ಅರಚಿತ ಪ್ರಶ್ನೆಗಳನ್ನೂ ಬಳಸಲಾಗಿದೆ. ಸಂದರ್ಭೋಚಿತವಾಗಿ ಪ್ರಶ್ನೆಗಳನ್ನು ರೂಪಿಸಿಕೊಳ್ಳುವುದಕ್ಕೆ, ಅವುಗಳನ್ನು ಕೇಳುವ ರೀತಿ, ಮತ್ತು ಅವುಗಳ ಭಾಷೆಯಲ್ಲಿ ಸಾಕಷ್ಟು ಮಾರ್ಪಾಡುಗಳನ್ನು ಮಾಡಿಕೊಳ್ಳಲು ಇದು ಅವಕಾಶ ನೀಡುತ್ತದೆ.

೨. **ಅವಲೋಕನ:** ನನ್ನ ಸಂಶೋಧನಾ ವಿಷಯಕ್ಕೆ ಸಂಬಂಧಿಸಿದಂತೆ ಆಯ್ದುಕೊಂಡಿರುವ ಕ್ಷೇತ್ರದಲ್ಲಿ, ಕ್ಷೇತ್ರಕಾರ್ಯವನ್ನು ಕೈಗೊಂಡಾಗ, ಸಂದರ್ಶನ ಮತ್ತು ಪ್ರಶ್ನಾವಳಿಗಳ ಬಳಕೆಯಲ್ಲಿ ಕಂಡು ಬರಬಹುದಾದ ಕೆಲವು ಸಮಸ್ಯೆಗಳನ್ನು ಅವಲೋಕನದ ಮೂಲಕ ಬಗೆಹರಿಸುವುದು ಸಾಧ್ಯ.

ಮಹಿಳೆಯರ ಸ್ಥಿತಿ ಗತಿಗಳ ಕುರಿತು ಸೂಕ್ಷ್ಮವಾಗಿ ಅವಲೋಕನದೊಂದಿಗೆ ಸಂದರ್ಶನದ ವಿಧಾನವನ್ನು ಸಂಯೋಜಿಸಬಹುದಾಗಿದೆ.

**೩. ಮಾಹಿತಿಯ ಆಕರಗಳು:**

**ಅ. ಮೂಲ ಆಕರಗಳು:**ಕ್ಷೇತ್ರಕಾರ್ಯದ ಮೂಲಕ ಸಂಶೋಧನಾ ಕಾರ್ಯಕ್ಕಾಗಿ ಆಯ್ಕೆ ಮಾಡಿರುವ ನಮೂನೆಯನ್ನು ನೇರವಾಗಿ ಪ್ರಸ್ತಾವಿಸಿ, ಅವಲೋಕನ, ಪ್ರಶ್ನಾವಳಿ ಹಾಗೂ ಸಂದರ್ಶನಗಳ ವೈಧಾನಿಕತೆಗಳನ್ನು ಅನ್ವಯಿಸಲಾಗುವುದು.

**ಬ. ಆನುಷಂಗಿಕ ಆಕರಗಳು:** ಮಾಹಿತಿ ನೀಡುವವರಿಂದ ನೇರವಾಗಿ ಸಂಗ್ರಹಿಸಿದ ಮಾಹಿತಿಯ ಹೊರತಾಗಿ ತನ್ನ ಸಂಶೋಧನೆಯ ಮೇಲೆ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಬೆಳಕನ್ನು ಚೆಲ್ಲುವಂತಹ ಮಾಹಿತಿಯನ್ನು ಯಾವ ಮೂಲಗಳಿಂದ ಸಂಗ್ರಹಿಸುತ್ತೇವೆಯೋ ಆ ಮೂಲಗಳಿಗೆ ಅನುಷಂಗಿಕ ಮೂಲಗಳು ಎನ್ನಲಾಗಿದೆ.

ಪ್ರಕಾಶಿತವಾದ ಮತ್ತು ಪ್ರಕಾಶಿಸಲ್ಪಡದೇ ಇರುವ ಖಾಸಗಿಯಾದ ಇಲ್ಲವೆ ಸಾರ್ವಜನಿಕ ಸ್ವರೂಪದ ದಾಖಲೆಗಳಿಂದ ಅಥವಾ ಅಂತಹ ಇತರೆ ಮೂಲಗಳಿಂದ ಸಂಗ್ರಹಿಸಿದ ಮಾಹಿತಿಗಳು ಈ ವರ್ಗಕ್ಕೆ ಸೇರಿಕೊಳ್ಳುತ್ತವೆ. ಆಯ್ಕೆ ಮಾಡಿಕೊಂಡ ವಿಷಯಕ್ಕೆ ಸಂಬಂಧಿಸಿದಂತೆ ಈ ಹಿಂದೆ ಮಾಡಲಾಗಿರುವ ಅಧ್ಯಯನಗಳನ್ನು ಆಧಾರವಾಗಿಟ್ಟುಕೊಳ್ಳಲಾಗುವುದು.

ಲೇಖಕರ ವೃತ್ತ ಪತ್ರಿಕೆಗಳು, ಲೇಖನಗಳು, ಜೊತೆಗೆ ವೈಯಕ್ತಿಕ ದಾಖಲೆಗಳು, ದಿನಚರಿಗಳು, ಅನುಭವಗಳ ದಾಖಲೆಗಳು, ವಾರ ಪತ್ರಿಕೆಗಳು, ಜೀವನ ಚರಿತ್ರೆಗಳು ಮುಂತಾದವುಗಳನ್ನು ಗಮನಿಸಿ ಪೂರಕ ಮಾಹಿತಿಯನ್ನು ಸಂಗ್ರಹಿಸಲಾಗುವುದು.

ಸಂಶೋಧನಾ ಪ್ರಬಂಧ ಮಹಾಪ್ರಬಂಧಗಳನ್ನು ಅಧ್ಯಯನ ಮಾಡಿ, ವಿಷಯಕ್ಕೆ ಸಂಬಂಧಿಸಿದ ಇನ್ನಿತರ ಅಕಾಡೆಮಿಕ ಮಾಹಿತಿಯನ್ನು ಪಡೆದುಕೊಳ್ಳಲಾಗಿದೆ.

**೪. ಸಂದರ್ಶನ ವಿಧಾನ:** "ಸಂದರ್ಶನ" ಎಂಬುದು ಸಂಶೋಧನಾ ಕ್ಷೇತ್ರದಲ್ಲಿ ಮಾಹಿತಿಯನ್ನು ಸಂಗ್ರಹಿಸಲು ಬಹಳ ಪರಿಣಾಮಕಾರಿಯಾದ ಹಾಗೂ ಯಶಸ್ವಿಯಾದ ವಿಧಾನವಾಗಿದೆ. ಪ್ರಶ್ನಾವಳಿಯಲ್ಲಿ ಪ್ರಶ್ನೆಗಳಿಗೆ ಲಿಖಿತ ರೂಪದಲ್ಲಿ ಉತ್ತರಗಳನ್ನು ಪಡೆಯಲಾಗುತ್ತಿದ್ದರೆ, ಸಂದರ್ಶನದಲ್ಲಿ "ಸಂಭಾಷಣೆಯ" ರೂಪದಲ್ಲಿ ಅಭಿಪ್ರಾಯ ಸಂಗ್ರಹಿಸುವುದಾಗಿದೆ.

ಸಂದರ್ಶನ ವಿಧಾನದಿಂದ ಲಭಿಸುವ ಫಲಿತಾಂಶವು ಸ್ಪಷ್ಟರೂಪದಲ್ಲಿದ್ದು, ಸತ್ಯಕ್ಕೆ ಹೆಚ್ಚು ಸಮೀಪವಿರುತ್ತದೆ. ಅಭಿಪ್ರಾಯವನ್ನು ವಿನಿಮಯ ಮಾಡಿಕೊಳ್ಳುವ ಮಾಹಿತಿಯನ್ನು ಸಂಪಾದಿಸುವ ಉದ್ದೇಶ ಇದಕ್ಕಿದೆ.

ನನ್ನ ಸಂಶೋಧನಾ ವಿಷಯಕ್ಕೆ ಸಂಬಂಧಿಸಿದಂತೆ ಮುಸ್ಲಿಂ ಮಹಿಳೆಯರನ್ನು ಮೌಲ್ವಿಗಳೊಂದಿಗೆ ಸಂದರ್ಶನವನ್ನು ನಡೆಸಿ ಮಾಹಿತಿ ಪಡೆಯುವುದು.

**ಟಿಪ್ಪಣಿಗಳು**

೧. ಡಾ. ಶಾಂತಾ ಇಮ್ರಾಪುರ, ಧರ್ಮ ಮತ್ತು ಮಹಿಳೆ, ಚೇತನ ಪ್ರಕಾಶನ, ಧಾರವಾಡ, ಪು.ಸಂ. ೯.

೨. ಡಾ. ವಿಜಯಾ, ನಿಜಧ್ಯಾನ ಮಹಿಳೆ ಸಾಮಾಜಿಕ ಪ್ರಜ್ಞೆ, ಪ್ರೆಸ್ ಕ್ಲಬ್ ಪ್ರಕಾಶನ, ಬೆಂಗಳೂರು ೨೦೦೫, ಪು.ಸಂ. ೭೦.

೩. ಅದೇ ಪು. ಸಂ. ೭೦.

೪. ಕಾವೇರಿ ಪಿ. ಸಾಗರ್, ಅಪ್ರಕಟಿತ ಸಂಪ್ರಬಂಧ, ಮಹಿಳಾ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೭, ಪು.ಸಂ. ೧.

೫. ಅನುಸೂಯ ಕಾಂಬಳೆ, ವಿಚಾರ ಸಾಹಿತ್ಯ ಮತ್ತು ಹೆಣ್ಣು, ವೈಚಾರಿಕ ಸಾಹಿತ್ಯ ಪ್ರಕಾಶನ, ರಾಯಭಾಗ, ೧೯೯೯, ಪು.ಸಂ. ೭೬.

* * *

# ಅಧ್ಯಾಯ : ಎರಡು

## ಮುಸ್ಲಿಂ ಮಹಿಳೆಯ ಸಾಮಾಜಿಕ ಬದುಕು: ಒಂದು ವಿಶ್ಲೇಷಣೆ

## ಅಧ್ಯಾಯ : ಎರಡು

## ಮುಸ್ಲಿಂ ಮಹಿಳೆಯ ಸಾಮಾಜಿಕ ಬದುಕು: ಒಂದು ವಿಶ್ಲೇಷಣೆ

### ೨.೧. ಮಹಿಳಾ ಬದುಕು ಒಂದು ನಿರ್ವಚನ

ಸಮಾಜದಲ್ಲಿ ಪುರುಷ ಪ್ರಧಾನ ವ್ಯವಸ್ಥೆ ಎಂದಿನಿಂದ ಪ್ರಾರಂಭವಾಯಿತೋ ಅಂದಿನಿಂದಲೂ ಅದು ತನ್ನ ಪ್ರಭುತ್ವವನ್ನು ಮರೆಯುತ್ತಲೇ ಬಂದಿದೆ. ಪ್ರತಿಯೊಂದು ಕಾಲಘಟ್ಟಗಳಲ್ಲಿಯೂ ಹೆಣ್ಣಿನ ವಿಷಯಕ್ಕೆ ಬಂದಾಗ ಅದು ಬಯಸಿದ್ದು 'ಹೆಣ್ಣಿನ ಮೌನವನ್ನೆ ಎಂ.ಎಸ್. ಆಶಾದೇವಿಯವರು ಹೀಗೆ ಬರೆಯುತ್ತಾರೆ. ಮೌನ ಪುರುಷ ಪ್ರಧಾನ ಸಮಾಜದ ಹೆಣ್ಣಿನ ಬಹು ಅಪೇಕ್ಷಿತ ಹಾಗೂ ನಿರೀಕ್ಷಿತ ಗುಣ ಮೌನವೇ ಹೆಣ್ಣಿನ ಆಭರಣ ಎನ್ನುವುದನ್ನು ಶತಮಾನಗಳಿಂದಲೂ ಕಲಾತ್ಮಕವಾಗಿ ಹೆಣ್ಣಿನ ಮೇಲೆ ಹೇರಲಾಗಿದೆ. ಅವಳ ಸುಖ ದುಃಖಗಳೆಲ್ಲ ಮೌನದಲ್ಲಿಯೇ ತುಂಬ ಶಕ್ತವಾಗಿ ಅಭಿವ್ಯಕ್ತವಾಗುತ್ತವೆ ಎಂದಿದ್ದಾರೆ. ಹೆಣ್ಣು ಇತಿಹಾಸದ ಪ್ರತಿಯೊಂದು ಕಾಲಘಟ್ಟಗಳಲ್ಲಿ ಮೌನವನ್ನು ಅನುಸರಿಸುತ್ತಾ ಬಂದರೂ ಕೂಡ ಈ ವ್ಯವಸ್ಥೆಯಲ್ಲಿ ಹೆಣ್ಣಿನ ಬಗೆಗಿರುವ ಚಿಂತನೆಗಳು ಭಯಾನಕ ಸ್ವರೂಪವಾಗಿವೆ. ಮನುಸ್ಮೃತಿಯಲ್ಲಿ ಮನು ಒಂದು ಕಡೆ ಹೀಗೆ ಬರೆಯುತ್ತಾನೆ, ''ಕಾಮ ಮತ್ತು ಕ್ರೋಧಗಳಿಗೆ ವಶನಾದ ಪಂಡಿತ ಮಾತ್ರವಲ್ಲದೆ ಪಾಮರ ಸ್ತ್ರೀಯು ವ್ರತಭ್ರಷ್ಟನನ್ನಾಗಿ ಮಾಡಬಲ್ಲಳು'' ಎಂದು ಮಹಿಳೆಯರ ಬಗೆಗಿನ ಈ ಪರಿಯ ಚಿಂತನೆಯನ್ನು ಮನು ಹೇಳಿದ್ದನ್ನು ಚಾಚು ತಪ್ಪದೇ ಈ ಪುರುಷ ಪ್ರಧಾನ ವ್ಯವಸ್ಥೆ ಪಾಲಿಸಿಕೊಂಡು ಬರುತ್ತಲಿವೆ.

''ಸಿಮೋನದ ಬೋವಾ ಹೇಳುವಂತೆ ಪುರುಷನನ್ನು ಮನುಷ್ಯ (Human Being) ಎಂದೂ ಸ್ತ್ರೀಯನ್ನು 'ಹೆಣ್ಣು' (female) ಎಂದೂ ಲಕ್ಷೀಕರಿಸಲಾಗುತ್ತದೆ. ಮಾನವಳಂತೆ ಆಕೆ ವರ್ತಿಸಲು ಯತ್ನಿಸಿದಾಗಲೆಲ್ಲಾ ಅದನ್ನು 'ಪುರುಷನೊಡನೆ ಸ್ಪರ್ಧಿಸುವ ಪ್ರಯತ್ನ'ವೆಂದು ನಿಂದಿಸಲಾಗುತ್ತದೆ. ಹೊರತು ಅವಳು ಕೂಡ ಮನುಷ್ಯಳೆಂದು ಸಮಾನತೆ ತೋರುವುದೇ ಇಲ್ಲ. ''ಸ್ತ್ರೀ ಹಾಗೂ ಪುರುಷ ಇದು ಮಾನವನ ಎರಡು ರೂಪಗಳು. ಅವು ಇಂದು ಯಾವ ರೀತಿಯಲ್ಲಿ ಅಭಿವ್ಯಕ್ತವಾಗುತ್ತವೆಯೋ ಅದುವೇ ಸಾಂಸ್ಕೃತಿಕ ಸಂದರ್ಭದಲ್ಲೂ ವ್ಯಕ್ತವಾಗುತ್ತದೆ. ಅದರ

ಶತಮಾನಗಳ ಚರಿತ್ರೆಯ ಫಲಶ್ರುತಿಯಾಗಿದೆ. ಎಂಬ ಶಾಸ್ತ್ರೀಯ ಸತ್ಯವನ್ನು ಮರೆಮಾಚುತ್ತದೆ. ಪ್ರಜೋತ್ಪಾದನೆಯ ಉದ್ದೇಶದಿಂದ ಸ್ತ್ರೀ ಹಾಗೂ ಪುರುಷ ಈ ಬಗೆಯ ವಿಷಮಲಿಂಗ ರೂಪಗಳನ್ನು ನಿಸರ್ಗವೂ ನಿರ್ಮಿಸಿದ್ದರೂ ಸ್ತ್ರೀ ಎಂದರೆ ಕನಿಷ್ಠಳು, ಪುರುಷ ಎಂದರೆ ಶ್ರೇಷ್ಠನು ಎಂಬ ಪರಿಕಲ್ಪನೆ ಮಾತ್ರ ಮಾನವ ನಿರ್ಮಿತವಾಗಿದೆ. ಎಂದು ಛಾಯಾ ದಾತಾರ್ ಅವರು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.[೧]

ಸನಾತನ ಕಾಲದಿಂದಲೂ ಶೋಷಿತಳಾಗಿರುವಂತಹ ಮಹಿಳೆಯರ ಶೋಷಣೆಯ ಸ್ವರೂಪಗಳು ಭಿನ್ನವಾಗಿವೆ. ಶೋಷಣೆಗೆ ವರ್ಗದ ಕಲ್ಪನೆಯಿಲ್ಲ. ಅದು ಮೇಲ್ವರ್ಗ, ಮಧ್ಯಮ ವರ್ಗ ಮತ್ತು ಕೆಳವರ್ಗದ ಮಹಿಳೆಯರ ಮೇಲೆ ನಿತ್ಯವೂ ನಡೆಯುತ್ತಿದೆ. ಅದು ದೈಹಿಕವಾದ ಶೋಷಣೆ ಆಗಿರಬಹುದು. ಇಲ್ಲವೇ ಮಾನಸಿಕ ಶೋಷಣೆಯಾಗಿರಬಹುದು ಸಾಮಾಜಿಕ, ಧಾರ್ಮಿಕ ಶೋಷಣೆಯೂ ಆಗಿರಬಹುದು. ಒಟ್ಟಿನಲ್ಲಿ ಶೋಷಣೆಯನ್ನು ಎದುರಿಸುತ್ತಿದ್ದಾಳೆ. ಈ ಶೋಷಣೆಗೆ ಮುಸ್ಲಿಂ ಸಮುದಾಯದ ಮಹಿಳೆಯರೂ ಹೊರತಾಗಿಲ್ಲ.

''ಈ ಸಮುದಾಯದ ಅನಿಷ್ಟ ಪದ್ಧತಿಳಾದ ಬಹುಪತ್ನಿತ್ವ, ತಲ್ಲಾಖ್, ಪರದಾ ಪದ್ಧತಿ, ನಿಷೇಧಗಳು, ವಿವಾಹ ಪದ್ಧತಿಗಳು ಹೆಣ್ಣು ಮಕ್ಕಳ ಭವಿಷ್ಯವನ್ನು ನರಕಕ್ಕೆ ತಳ್ಳುತ್ತಲಿವೆ. ಈ ಎಲ್ಲಾ ಅನಿಷ್ಟ ಪದ್ಧತಿಗಳು ರೂಪುಗೊಂಡಿರುವ ಹಿನ್ನೆಲೆಯನ್ನೂ ಕುರಿತು ಚಿಂತಿಸಿದರೆ ಸಿಗುವ ಉತ್ತರ ಈ ವ್ಯವಸ್ಥೆಗೆ ಕಾರಣವಾದ ಪಿತೃಪ್ರಧಾನ ವ್ಯವಸ್ಥೆ ಎಂದೇ ಹೇಳಬಹುದು. ಪುರುಷನು ಧರ್ಮದ ಹೆಸರಿನಲ್ಲಿ ರೂಪಿಸಿದ ನೀತಿ-ನಿಯಮಗಳನ್ನು ಚಾಚುತಪ್ಪದೇ ಪಾಲಿಸಿಕೊಂಡು ಬರುವಂತೆ ಮಾಡಲಾಗಿದ್ದು ಹೆಣ್ಣಿನ ಮೇಲೆ ಪುರುಷ ಸಾಧಿಸಿದ ಪ್ರಭುತ್ವಕ್ಕೆ ಈ ಪದ್ಧತಿಗಳು ಸಾಕ್ಷಿಯಾಗಿ ನಿಲ್ಲುತ್ತವೆ.

ಈ ಪ್ರಭುತ್ವವು ಮುಸ್ಲಿಂ ಮಹಿಳೆಯರ ಮೇಲೆ ಪ್ರಭಾವವನ್ನು ಬೀರಿವೆ. ದಿನಂಪ್ರತಿ ಮಹಿಳೆಯರು ಕುಟುಂಬದಲ್ಲಿ ಗಂಡನ ಅಧಿಪತ್ಯಕ್ಕೆ ಸಮಾಜದಲ್ಲಿ ಧಾರ್ಮಿಕ ಕಟ್ಟಳೆಗಳು, ಸಾಮಾಜಿಕ ನಿರ್ಬಂಧಗಳಿಗೆ ಸಿಲುಕಿ ಹಿಂಸೆಗೆ ಗುರಿಯಾಗುತ್ತಲೇ ಇದ್ದಾರೆ. ಇದ್ದುದರಲ್ಲಿಯೇ ಸ್ವಲ್ಪ ಮೇಲ್ವರ್ಗದ ಮುಸ್ಲಿಂ ಮಹಿಳೆಯರು ಸಾಮಾಜಿಕ ಸಂವಹನಕ್ಕೆ ಬಂದಿರುವುದರಿಂದ ಸಮಸ್ಯೆಗಳಿಂದ ಗಂಡಂದಿರಿಂದ ಶೋಷಣೆಯನ್ನು ಎದುರಿಸುತ್ತಿರುವ, ಸಾಮಾಜಿಕ ಸಂವಹನದಿಂದ ದೂರ ಉಳಿದಿರುವ ಮಧ್ಯಮ ವರ್ಗದ ಮುಸ್ಲಿಂ ಮಹಿಳೆಯರು ತೀರ ಸಂಕಷ್ಟಕ್ಕೆ ಸಿಲುಕಿದ ಜೀವನ ನಡೆಸುತ್ತಿದ್ದಾರೆ.''

''ಅಧಿಕಾರ ಸಂಪತ್ತು ಬೌದ್ಧಿಕ ಕ್ಷೇತ್ರವನ್ನು ತನ್ನ ಏಕಸ್ವಾಮ್ಯಕ್ಕೊಳಪಡಿಸಿಕೊಂಡ ಪುರುಷಶಕ್ತಿ ರಾಜಕಾರಣದಿಂದ ನಿಯಂತ್ರಿತ ಸಮಾಜ ವ್ಯವಸ್ಥೆ ಮತ್ತು ಪುರುಷ ಸೃಷ್ಟಿಗಳಾದ ಧರ್ಮ, ದೇವರು ತತ್ವ ನೀತಿ ನಿಯಮಾವಳಿಗಳೆಲ್ಲವೂ ಪುರುಷ ಹಿತಾಸಕ್ತಿ ಕೇಂದ್ರಿತವಾಗಿಯೇ ರೂಪುಗೊಂಡದು ಇತಿಹಾಸದ ಸಹಜ ಬೆಳವಣಿಗೆಯಾಗಿದೆ. ಮಾತೃತ್ವದ ಪರಮಾಧಿಕಾರವನ್ನು ಪಿತೃತ್ವ ಕಸಿದುಕೊಂಡಾಗಲೇ ಸ್ತ್ರೀಕುಲವು ಶೂದ್ರ ಸಮಾನ ನೆಲೆಗೆ, ಶ್ರೇಣಿಕೃತ ವ್ಯವಸ್ಥೆಯ ಅಂಚಿಗೆ ತಳ್ಳಲ್ಪಟ್ಟಿತು. (ಉತ್ಪಾದನಾ ಕ್ಷೇತ್ರಗಳಿಂದ ಸಂಪೂರ್ಣವಾಗಿ ಹೊರಗುಳಿಯುವಂತಾದ ಇಂಥ ಸ್ಥಿತಿಯಲ್ಲಿ ಹೆಣ್ಣು ಪರಾಧೀನತೆ ಪರಾವಲಂಬನೆಯ ಬದುಕಿನಲ್ಲಿ ಕೌಟುಂಬಿಕ ಹಿತಾಸಕ್ತಿಗಳಿಗಾಗಿ ಗಾಣದೆತ್ತಿನಂತೆ, ಕಣ್ಣಿದ್ದು ಕುರುಡಗಳಾಗಿ, ಬಾಯಿದ್ದೂ ಮೂಕಳಾಗಿ ಪಂಚೇಂದ್ರಿಯಗಳನ್ನೆಲ್ಲಾ ಪುರುಷಾಧಿಪತ್ಯಕ್ಕೆ ಮಾರಿಕೊಂಡು ಅದೃಶ್ಯ ನೆಲೆಯಲ್ಲಿ ಬದುಕಬೇಕಾಯಿತು.''[೨]

ಸ್ತ್ರೀ ಸಮಾಜದ ಇಂಥ ಆತ್ಮ ವಿಸ್ಮೃತಿಯ ಫಲವಾಗಿಯೇ ಅವಳ ಸಹಭಾಗಿತ್ವದ ಸುಧೀರ್ಘ ಚರಿತ್ರೆಯು ಇತಿಹಾಸ ಚರಿತ್ರೆ ಸಂಸ್ಕೃತಿಯ ಪುಟಗಳಲ್ಲಿ ದಾಖಲಾಗದೇ ಹೋಗುವಂತಾಯಿತು. ಮಾನವ ಸಂಸ್ಕೃತಿಯನ್ನು ಕಟ್ಟಿ ಪೋಷಿಸಿ, ಪಾಲಿಸುವಲ್ಲಿ ಮಾನವ ಸಂತತಿಯ ನಿರಂತರತೆಗಾಗಿ ಗಂಡಿನೊಡನೆ ಸರಿಸಮವಾಗಿ ತಮ್ಮ ಶ್ರಮ ಶಕ್ತಿಯೆಲ್ಲವನ್ನು ಪ್ರತಿಫಲಕಾಂಕ್ಷೆ ರಹಿತವಾಗಿ ಧಾರೆಯೆರೆದ ಹೆಣ್ಣು ಮಾನವ ಚರಿತ್ರೆಯಲ್ಲಿ ಮೌನ ಸಂಸ್ಕೃತಿಯ ಕತ್ತಲೆಯ ಅಗೋಚರ ಪ್ರಪಂಚದಲ್ಲಿ ಉಸಿರಾಡುವಂತಾಗಿದೆ.

''ಅಬಲತ್ವ, ಅಧೀನತೆ, ಅಸಹಾಯಕತೆ, ಬುದ್ಧಿಹೀನತೆಯ ಪುರುಷ ಕಲ್ಪಿತ ಮಿಥ್ಯಾರೋಪಗಳಿಂದಾದ ವ್ಯಕ್ತಿತ್ವ ಗ್ರಾಸದಿಂದ ಕೀಳರಿಮೆ ಅಜ್ಞಾನ, ವಿದ್ಯೆ ಆತ್ಮ ವಿಶ್ವಾಸದ ಕೊರತೆಯಿಂದ ಹೆಣ್ಣಿನ ಪ್ರಕೃತಿ ಸಹಜ ಶಕ್ತಿಗಳು ವಿಕಾಸಗೊಳ್ಳದೇ ಮುರುಟುವಂತಾಗಿದ್ದರಿಂದ ಹೆಣ್ಣು ಗಂಡಿನ ನೆರಳಾಗಿಯೇ ನರಳುತ್ತಾ ಬದುಕಿದುದು ಮಾನವ ಕುಲದ ಕರಾಳ, ವಾಸ್ತವವಾಗಿದೆ. ಜಗತ್ತಿನ ಬಹುತೇಕ ಪ್ರಾಚೀನ ಸಂಸ್ಕೃತಿಗಳಲ್ಲಿ ದೈವಾರಾಧನೆಯ ಮೊದಲ ಘಟ್ಟವು ಮಾತೃ ಆರಾಧನೆಯಾಗಿದ್ದರೂ ಪುರುಷ ಪ್ರಾಧಾನ್ಯತೆಯನ್ನು ಶಕ್ತಿ ರಾಜಕಾರಣವು ಲಿಂಗಾಧಾರಿತ ತಾರತಮ್ಯ ಹುಟ್ಟುಹಾಕಿ ಹೆಣ್ಣಿನ ಅಸ್ತಿತ್ವ ಅನನ್ಯತೆಯನ್ನು ಅಮಾನ್ಯಗೊಳಿಸಿದ್ದು ಸ್ಪಷ್ಟವಾಗಿದೆ.''[೨]

**೨.೨. ಸಾಮಾಜಿಕ ವ್ಯವಸ್ಥೆ ಮತ್ತು ಲಿಂಗತಾರತಮ್ಯ**

ಮಾನವರ ಪೂರ್ವದಲ್ಲಿ ಶ್ರಮ ವಿಭಜನೆಯ ತಾತ್ವಿಕತೆಯಿಂದ ಉದ್ಭವವಾದ ತಾರತಮ್ಯವು, ಕುಟುಂಬ, ಶಿಕ್ಷಣ, ಧರ್ಮ, ಸಂಸ್ಕೃತಿ ಇನ್ನಿತರ ವಲಯಗಳಲ್ಲಿಯೂ ವಿಸ್ತರಿಸಿ ಬಿಟ್ಟಿದೆ. ಸಮಾಜವು ಮಾನವರಿಂದ ರಚಿಸಲ್ಪಟ್ಟು ಮೂಲಭೂತ ಪರಿಕಲ್ಪನೆಗಳಲ್ಲಿ ಸಾಮಾಜಿಕ ಸಂಸ್ಥೆಯು ಒಂದಾಗಿದೆ.

ಕುಟುಂಬ, ಶಿಕ್ಷಣ, ಧರ್ಮ, ಸಂಸ್ಕೃತಿ, ರಾಜಕೀಯ, ಆರ್ಥಿಕ ಮಾಧ್ಯಮ ಇನ್ನಿತರ ಇವೆಲ್ಲವೂ ಸಾಮಾಜಿಕ ಸಂಸ್ಥೆಗಳಾಗಿದ್ದು, ಸಮಾಜ ವ್ಯಕ್ತಿಗಳ ಬೇಡಿಕೆಗಳ ಅವಶ್ಯಕತೆಗಳನ್ನು ಈಡೇರಿಸುವ ಉದ್ದೇಶದಿಂದಾಗಿ ಸ್ಥಾಪಿಸಲ್ಪಟ್ಟವುಗಳಾಗಿವೆ. ಅವಶ್ಯಕವಾದ ಹಲವಾರು ಚಟುವಟಿಕೆಗಳನ್ನು ಸಂಘಟಿಸಿ ಅವುಗಳ ಮೂಲಕವಾಗಿ ಉದ್ದೇಶಗಳನ್ನು ಈಡೇರಿಸಿಕೊಳ್ಳಲು ಅನುವು ಮಾಡಿಕೊಳ್ಳಲಾಗುತ್ತದೆ.

''ನಮ್ಮ ಮಹಿಳೆಯರಿಗೆ ಸಮಸ್ಯೆಗಳಿಲ್ಲ ಹೂವಿನಂತೆ ಕಾಪಾಡುತ್ತೇವೆ ವಜ್ರಗಳಂತೆ ರಕ್ಷಿಸುತ್ತೇವೆ.'' ಎಂದು ಹೇಳುತ್ತಲೇ ಕಷ್ಟ ಕೋಟಲೆಗಳ ಬಂಧನದಲ್ಲಿರಿಸಿರುವ ಪುರುಷರು ಇರುವವರೆಗೆ ಮುಸ್ಲಿಂ ಮಹಿಳೆಯರ ಉದ್ಧಾರವಾಗದು, ಇಸ್ಲಾಂ ಧಾರ್ಮಿಕ ವ್ಯವಸ್ಥೆಯಲ್ಲಿ ಪರದಾ, ಅನಕ್ಷರತೆ, ಅನಾರೋಗ್ಯ ಅಜ್ಞಾನ, ತುಂಬಿರುವಂಥ ಪರಿಸ್ಥಿತಿಗೆ ಬಲಿಯಾಗುತ್ತಿರುವವರೆಲ್ಲ ಅಮಾಯಕ ಮಹಿಳೆಯರು.''[೩]

''ಒಬ್ಬ ಗರಿಷ್ಟ ಶೋಷಿತ ಪುರುಷನಿಂದಲೂ ಸ್ತ್ರೀ ಶೋಷಣೆಗೆ ಒಳಗಾಗುತ್ತಾಳೆ ಎಂದರೆ ಹೆಣ್ಣಿನ ದಮನದ ಪ್ರಮಾಣ ಎಷ್ಟರ ಮಟ್ಟಿನದು ಎನ್ನುವುದರ ಅರಿವಾಗುತ್ತದೆ. ಅಂಗೀಕರಣ ಪ್ರವೃತ್ತಿಗಳು ಕುಟುಂಬದೊಳಗೆ ಆರಂಭವಾಗುತ್ತವೆ ಮತ್ತು ಸಾಮಾಜಿಕ ಸಂಘಟನೆಯಲ್ಲಿ ಮುಂದುವರಿಯುತ್ತದೆ. ಹೆಣ್ಣನ್ನು ಹುಟ್ಟಲು ಬಿಡದ ಲಿಂಗ ವ್ಯವಸ್ಥೆಯ ಕ್ರೌರ್ಯ ಹುಟ್ಟಿದ ಹೆಣ್ಣನ್ನು ಬದುಕಲು ಬಿಟ್ಟಿಲ್ಲ. ಗಂಡು ಶ್ರೇಷ್ಠ, ಹೆಣ್ಣು ಕನಿಷ್ಟ ಎಂಬ

ಶ್ರೇಣೀಕರಣ ಮಾನವನ ಮೂಲಭೂತ ಅಗತ್ಯಗಳಾದ ಆಹಾರ, ಆರೋಗ್ಯ ಬಟ್ಟೆ, ಶಿಕ್ಷಣಗಳ ಒದಗುವಿಕೆಯಲ್ಲೂ ಕಾಣುತ್ತದೆ. ಕುಟುಂಬದೊಳಗಿನ ಈ ಲಿಂಗೀಕರಣ ಪ್ರಕ್ರಿಯೆ ಹೇಗಿರುತ್ತದೆ. ಎಂದರೆ ಹೆಣ್ಣು, ಎಲ್ಲಿರಬೇಕು-ಎಲ್ಲಿರಬಾರದು, ಹೇಗಿರಬೇಕು ಹೇಗಿರಬಾರದು, ಯಾರೊಡನೆ ಮಾತಾಡಬೇಕು-ಮಾತಾಡಬಾರದು, ಯಾವ ಕೆಲಸ ಮಾಡಬೇಕು-ಮಾಡಬಾರದು ಯಾವ ಬಟ್ಟೆ ತೊಡಬೇಕು-ತೊಡಬಾರದು, ಎನ್ನುವಲ್ಲಿಂದ ತೊಡಗಿ ಯಾವ ಮಗುವನ್ನು ಹೆರಬೇಕು-ಹೆರಬಾರದು, ಎಷ್ಟು ಮಗುವನ್ನು ಹೆರಬೇಕು-ಹೆರಬಾರದು ಎನ್ನುವ ಆಯ್ಕೆ ರಹಿತ ಸ್ಥಿತಿಗೆ ತಳ್ಳಿದೆ.

ಮುಸ್ಲಿಂ ಕುಟುಂಬಗಳಲ್ಲಿ 'ಹೆಣ್ಣಾಗಲು' ಆಕೆಗೆ ತರಬೇತಿ ನೀಡಲಾಗುತ್ತದೆ. ಹೊರತು ಅವಳಲ್ಲಿ ಆತ್ಮವಿಶ್ವಾಸವನ್ನು ಹುಟ್ಟಿಸುವ ಮತ್ತು ಹಕ್ಕುಗಳ ಬಗ್ಗೆ ಅರಿವು ಮೂಡಿಸುವ ಪ್ರಯತ್ನ ನಡೆಯುತ್ತಿಲ್ಲ. ತನ್ನ ಬದುಕು ಹಾಗೂ ಆ ಹಕ್ಕುಗಳ ಬಗೆಗೆ ಪೂರ್ಣ ಕುರುಡಾಗಿರುವ ಹೆಣ್ಣು ಪ್ರಶ್ನಿಸುವ ಪ್ರಜ್ಞೆ ಹಾಗೂ ಪ್ರತಿಭಟಿಸುವ ಧೈರ್ಯ ಎರಡನ್ನೂ ಕಳೆದುಕೊಂಡಿರುತ್ತಾಳೆ ಇಂದು ಮುಸ್ಲಿಂ ಮಹಿಳೆ. ಈಕೆಯ ಹುಟ್ಟು, ಬದುಕು, ದೇಹ-ಮನಸ್ಸು ಎಲ್ಲವೂ ಗಂಡಿಗಾಗಿ ಎನ್ನುವ ಆದರ್ಶದ ನೆಲೆಯ ಪ್ರವೃತ್ತಿಗಳೇ ಗಂಡಿನ ದೌರ್ಜನ್ಯವನ್ನು ಹೆಣ್ಣಿನ ದಮನವನ್ನು ನಿರಾತಂಕವಾಗಿಸಿದೆ ಎಂದು ಶಿಕ್ಷಕಿ (ವಕ್ತೃ) ಮೆಹರುನ್ನಿಸಾ ಬೇಸರದಿಂದ ವಾಸ್ತವತೆಯ ಚಿತ್ರಣ ನೀಡಿದ್ದಾರೆ.

ಪ್ರಕೃತಿಯಲ್ಲಿ ಗಂಡು ಮತ್ತು ಹೆಣ್ಣು ಎರಡು ಜೀವಿಗಳ ಬದುಕನ್ನು ಕಾಣುತ್ತೇವೆ. ಸೃಷ್ಟಿಯ ಕ್ರಿಯೆಯ ಮುಂದುವರಿಕೆಗೆ ಇವು ಅವಶ್ಯವಾಗಿದೆ. ಮಾನವರಲ್ಲಿಯೂ ಈ ವ್ಯತ್ಯಾಸಗಳು ಇವೆ, ಹೆಣ್ಣು ಗಂಡಿನಲ್ಲಿ ತನ್ನದೇ ಆಗಿರತಕ್ಕಂತಹ ದೈಹಿಕ ವ್ಯತ್ಯಾಸಗಳು ಇವೆ. ಮತ್ತು ಅವರ ಹಾಗೆ ಇರಲೇ ಬೇಕಾಗಿರುವಂತಹವು ಒಂದಕ್ಕೊಂದು ಪೂರಕವಾಗಿ ರಚನೆಗೊಂಡಿರುತ್ತವೆ.

ದೈಹಿಕವಾಗಿ ಪುರುಷನು ಪ್ರಬಲನಾಗಿದ್ದು, ಮಹಿಳೆ ಸ್ವಲ್ಪ ದುರ್ಬಲಳಾಗಿರುತ್ತಾಳೆ. ಇದು ಸತ್ಯವಾಗಿದ್ದು ಒಪ್ಪಿಕೊಳ್ಳುವಂತಹದು ದೈಹಿಕ ವ್ಯತ್ಯಾಸಗಳೇ ನಿಜವಾದ ನೈಸರ್ಗಿಕ ವ್ಯತ್ಯಾಸಗಳಾಗಿರುತ್ತವೆ. ಇದಕ್ಕೆ ತರ್ಕಿಸುವುದು ವ್ಯರ್ಥ ವಿಚಾರವೇ ಸರಿ. ಆದರೆ ಈ ಜೀವಿಗಳ ವ್ಯತ್ಯಾಸಗಳು ಭಿನ್ನ ರೀತಿಯಲ್ಲಿ ತಾರತಮ್ಯಗಳು ಸೃಷ್ಟಿಗೊಳ್ಳುತ್ತವೆ. ಆರ್ಥಿಕತೆಯಲ್ಲಿ ಸಾಮಾಜಿಕ, ಶಿಕ್ಷಣ, ಸಂಸ್ಕೃತಿ, ಧರ್ಮ, ರಾಜಕೀಯ, ಇನ್ನಿತರ ಎಲ್ಲಾ ವಿವಿಧ ವಲಯಗಳಲ್ಲಿ ಈ ತಾರತಮ್ಯದ ವ್ಯತ್ಯಾಸಗಳು ಕಲ್ಪಿತ ಮಾದರಿಯಾಗಿ ರಚನೆಗಳ್ಳುತ್ತಿರುವುದು ಕಾಣುತ್ತೇವೆ.

ಸಾಮಾಜಿಕ ಬದುಕಿನಲ್ಲಿ ಪುರುಷ ಪ್ರಧಾನ ವ್ಯವಸ್ಥೆ ಜಾರಿಯಾದ ದಿನದಿಂದ ಹಿಡಿದು ಇಲ್ಲಿಯವರೆಗೂ ರೂಪಿಸಿರುವಂತಹ ನೀತಿ-ನಿಯಮಗಳು ಧರ್ಮದ ಹೆಸರಿನಲ್ಲಿ ಮಹಿಳೆಯರ ಮೇಲೆ ನಿಯಂತ್ರಣವನ್ನು ಹೇರುತ್ತಲೇ ಬಂದಿವೆ. ಪುರುಷರ ಇತಿಹಾಸದ ಮೂಲಕ ಮಹಿಳೆಯರ ಸ್ಥಾನ ಮಾನವನ್ನು ಗುರ್ತಿಸುವುದು ಹಿಂದಿನಿಂದಲೂ ಬಂದಿರುವಂತಹ ಪರಿಪಾಠವಾಗಿದೆ. ಮಹಿಳೆಯೂ ಸಮಾಜದಲ್ಲಿ, ಕುಟುಂಬದಲ್ಲಿ ಹೇಗೆ ನಡೆದುಕೊಳ್ಳಬೇಕೆಂಬ ರೀತಿ-ನೀತಿಗಳನ್ನು ಸೃಷ್ಟಿಸಿದ ವ್ಯವಸ್ಥೆಯು ಸಂವಿಧಾನದ ಕಾನೂನು ಕಟ್ಟಳೆಗಳಂತೆ ಸಾಂಪ್ರದಾಯಕವಾದ ಸಾಮಾಜಿಕ ನೀತಿ-ನಿಯಮಗಳು ನಿಯಂತ್ರಿಸುತ್ತಲಿವೆ. ಸಾಮಾಜಿಕ ವ್ಯವಸ್ಥೆಗಳು (ಮುಸ್ಲಿಂ) ಅಮೂರ್ತವಾಗಿವೆ,

ಅಮೂರ್ತವಾಗಿರುವ ಮುಸ್ಲಿಂ ಸಂಪ್ರದಾಯಗಳನ್ನು ಪಾಲಿಸಿಕೊಂಡು ಬರುವಲ್ಲಿ ಸ್ವಲ್ಪ ಏರುಪೇರಾದರೂ ಈ ಸಮಾಜ ಅವಳ ಮೇಲೆ ನಿಯಂತ್ರಣವನ್ನು ಹೇರುತ್ತದೆ. ಒಟ್ಟಿನಲ್ಲಿ ನಮ್ಮ ಸಂಪ್ರದಾಯ, ಆಚರಣೆಗಳೆಲ್ಲವೂ ಮಹಿಳೆಯರನ್ನು ''ಬಂಗಾರದ ಪಂಜರ''ದಲ್ಲಿರಿಸಿ ಅವಳ ಮೇಲೆ ಅಧಿಕಾರವನ್ನು ಸ್ಥಾಪಿಸುತ್ತಾ ಆ ಅಧಿಕಾರಕ್ಕೆ ಮರು ಮಾತನಾಡದೇ ಮೌನಸಮ್ಮತಿಯನ್ನು ಸೂಚಿಸುತ್ತಲೇ ವ್ಯವಸ್ಥೆಗೆ ಹೊಂದಿಕೊಂಡೇ ಬರುತ್ತಿದ್ದಾಳೆ.

''ಜಗತ್ತಿನ ಧರ್ಮಗಳ ಚರಿತ್ರೆಯ ಮಾತೃ ದೇವತೆಯ ಆರಾಧನೆಯ ನೆಲೆಯಿಂದ ಆರಂಭವಾಗಿ ಮಾನವನ ನಾಗರಿಕತೆಯ ಬೆಳವಣಿಗೆಯ ಜೊತೆಯಲ್ಲಿ ಬೆಳೆದು ಬಂದಿದೆ. ಈ ಚರಿತ್ರೆಯಲ್ಲಿ ಹೆಣ್ಣು ಆರಾಧನೆಯ ಅಥವಾ ಆಳಲ್ಪಡುವ ಸ್ಥಿತಿಗತಿಗಳಲ್ಲಿ ಸೇರಿಕೊಂಡಿದ್ದಾಳೆ. ಜಗತ್ತಿನ ಸಕಲ ಸೃಷ್ಟಿಯ ಮೂಲದಲ್ಲಿರುವ ಪರತತ್ವವನ್ನು ಸ್ತ್ರೀಯ ರೂಪದಲ್ಲಿ ಕಂಡಂಥ ಧಾರ್ಮಿಕ ಪಂಥಗಳ ದೃಷ್ಟಿ ಹೆಣ್ಣನ್ನು ಅತ್ಯುಚ್ಛ ಸ್ಥಾನದಲ್ಲಿ ಇರಿಸುತ್ತದೆ. ಧಾರ್ಮಿಕ, ಆಧ್ಯಾತ್ಮಿಕ, ಸ್ತರಗಳಲ್ಲಿ ಹೆಣ್ಣು ಒಬ್ಬ ಸ್ವತಂತ್ರ ವ್ಯಕ್ತಿ ಎಂದಾಗಲಿ ಮೋಕ್ಷದ ಹಕ್ಕು ಮಾನವ ಜೀವಿ ಎಂದಾಗಲಿ, ಆತ್ಮವೆಂದಾಗಲೀ ಗುರುತಿಸದೇ ಆಕೆಯನ್ನು ನಿಕೃಷ್ಟ ಪ್ರಾಣಿಯಂತೆ ಕಾಣುವ ಧಾರ್ಮಿಕ ಪರಿಕಲ್ಪನೆಗಳು ಈ ಚರಿತ್ರೆಯ ಇನ್ನೊಂದು ತುದಿಯಾಗಿದೆ.

ಜಗತ್ತಿನ ಧರ್ಮಗಳು ಹೆಣ್ಣಿನ ಹುಟ್ಟನ್ನು ಅವಹೇಳನದಿಂದ ನೋಡುವುದರಿಂದ ಹಿಡಿದು ಆಕೆಯೇ ಮಾನವನ ಹುಟ್ಟಿಗೆ ಆಧಾರ ಎಂದು ಕೊಂಡಾಡುವವರೆಗೂ ಹರಡಿಕೊಂಡಿವೆ. ಒಂದು ಕಡೆ ಪೂಜ್ಯನೀಯ ಸ್ಥಾನದಲ್ಲಿರಿಸಿ ಪೂಜಿಸಿದರೆ, ಮತ್ತೊಂದು ಕಡೆ ತುಚ್ಛೀಕರಿಸಿರುವುದು ಕಂಡುಬರುತ್ತದೆ. ಹೆಣ್ಣನ್ನು ದೇವತೆಯನ್ನಾಗಿ ದೈತ್ಯಳನ್ನಾಗಿ ರೂಪಿಸಿದವರು ಪುರುಷರೇ ಹೊರತು ಮಹಿಳೆಯರಲ್ಲ, ಹೆಣ್ಣು ಅವರ ಸೃಷ್ಟಿಗೆ ಹೊಂದಾಣಿಕೆಯಾಗುತ್ತಲೇ ಬಂದಿದ್ದಾಳೆ. ದೇವತೆ ಮಾಡಿದರೂ ದೈತ್ಯಳನ್ನಾಗಿ ಮಾಡಿದರೂ ಹೆಣ್ಣನ್ನು ದ್ವಿತಿಯ ದರ್ಜೆಯವಳಾಗಿ ಕಂಡಿದೆ. ಅವಳ ಅಭಿಪ್ರಾಯಗಳಿಗೆ ಯಾವುದೇ ಬೆಲೆ ನೀಡದೆ, ಅವಳ ಬುದ್ಧಿ ಮೊಣಕಾಲ ಕೆಳಗೆ ಎನ್ನುವಂತಹ ನಂಬಿಕೆಗಳನ್ನು ಸೃಷ್ಟಿಸುತ್ತಲೇ ಬಂದಿದೆ. ಕುಟುಂಬದ ವಿಷಯದಲ್ಲಾಗಲಿ, ವಿವಾಹದ ವಿಷಯದಲ್ಲಾಗಲೀ ಅವಳ ಅಭಿಪ್ರಾಯಕ್ಕೆ ಯಾವುದೇ ಮಹತ್ವವನ್ನು ವ್ಯವಸ್ಥೆ ನೀಡಿಲ್ಲ.

**೨.೩. ಮುಸ್ಲಿಂ ಮಹಿಳೆ ಮತ್ತು ಸಾಮಾಜಿಕತೆ**

ವ್ಯಕ್ತಿಯ ಬದುಕು ಸಂಘಟಿತವಾಗಿ ಸಮೂಹ ದಿಕ್ಕಿನಲ್ಲಿ ಕಾರ್ಯಪ್ರವೃತ್ತರಾದ ದಿನದಿಂದಲೇ ಜನ ಸಮುದಾಯಗಳಲ್ಲಿ ಸಮಾಜದ ಅಸ್ತಿತ್ವ ಮೂಡಿಬಂದಿದೆ. ಈ ಸುಸಂಘಟಿತ ಸಮೂಹ ಬದುಕಿನ ಒಪ್ಪಂದದ ಬದುಕೆ ಸಾಮಾಜಿಕತೆಯಾಗಿದೆ. ಈ ಸಾಮಾಜಿಕ ಬದುಕು ಹೆಣ್ಣು ಗಂಡಿಗೆ ಏಕ ಪ್ರಕಾರವಾಗಿಲ್ಲದಿರುವುದು, ಚಾರಿತ್ರಿಕವಾಗಿ ತಾರತಮ್ಯದಿಂದ ಬೆಳೆದು ಬಂದಿರುವುದು ಪ್ರಸ್ತುತ ಲಿಂಗ ತಾರತಮ್ಯ ಸಮಸ್ಯೆಯಾಗಿದೆ.

ಮುಸ್ಲಿಂ ಸಮಾಜದಲ್ಲಿಯೂ ಸಹ ಹೆಣ್ಣು ಮಗುವಿಗೂ ಮತ್ತು ಗಂಡು ಮಗುವಿಗೂ ನೀಡುವ ಮೌಲ್ಯಗಳಲ್ಲಿ ತಾರತಮ್ಯವಿರುವುದು ಕಾಣುತ್ತವೆ. ಬಾಲ್ಯದಲ್ಲಿಯೇ ಸಮಾಜ ರೂಪಿಸಿರುವಂತಹ ಮೌಲ್ಯಗಳಿಗೆ ಒಪ್ಪಿಕೊಂಡು ಹೋಗಲು ಈ ಕುಟುಂಬವೇ ಮಧ್ಯಸ್ಥಿಕೆ ವಹಿಸುತ್ತವೆ. ''ತಾಯಿಯ ಸ್ತ್ರೀಯಾತ್ಮಕ ಗುಣಗಳನ್ನು ಪ್ರತಿನಿಧಿಸುವ ಪಾತ್ರ ಮಾದರಿಯನ್ನು ಬಾಲ್ಯದಿಂದಲೇ ಮಗಳಿಗೆ ಭೋದಿಸುವುದು. ಜೊತೆಗೆ ಅವಳ ವರ್ತನೆ, ಮನೋಭಾವ,

ಪ್ರವೃತ್ತಿಗಳನ್ನೂ ಕೆಲವೊಮ್ಮೆ ನೇರವಾಗಿ ಭಾಗಿಯಾಗದಿದ್ದರೂ ಪುರುಷಾತ್ಮಕ ಗುಣಗಳ ಪ್ರಾಬಲ್ಯವನ್ನು ಹುಡುಗಿಯ ಮನಸ್ಸಿನಲ್ಲಿ ನೆಲೆಗೊಳಿಸಲು ಸಹಕರಿಸುತ್ತಾನೆ. ಇದೇ ರೀತಿ ಗಂಡು ಮಕ್ಕಳಿಗೆ ಧೈರ್ಯ, ನಿರ್ಧಾರ ತೆಗೆದುಕೊಳ್ಳುವ ಅಧಿಕಾರ ಬರುವಂತಹ ವೃತ್ತಿ, ಮನೋಭಾವಗಳನ್ನು ಪ್ರೋತ್ಸಾಹಿಸಲಾಗುತ್ತದೆ.''

ಮುಸ್ಲಿಂ ಕುಟುಂಬಗಳಲ್ಲೂ ಸಹ ಲಿಂಗತಾರತಮ್ಯದ ಭಿನ್ನತೆ ದ್ವಂದ್ವಗಳ ಸೃಷ್ಟಿಯಿಂದ ಗಂಡು ಹೆಣ್ಣಿನ ವಿವಿಧ ಮನೋಭಾವಗಳು ಬೇರೆ ಬೇರೆ ಯೋಚನೆಗೆ ಸಿದ್ಧಪಡಿಸಿದ ಹಾಗಿವೆ. ಕುಟುಂಬ ಸಮಾಜದ ಸೃಷ್ಟಿಗಳು ಕೆಲವು ಲಿಂಗಕ್ಕೆ ಮಾತ್ರ ಪ್ರೋತ್ಸಾಹಿಸಿ ಉಳಿದವುಕ್ಕೆ ನಿರಾಕರಿಸುತ್ತವೆ. ಹೀಗಾಗಿ ತಮ್ಮ ಜೀವನದ ಸುಭದ್ರ ತಳಪಾಯ ಊರಲು, ಸಮಾಜದಲ್ಲಿ ನೈತಿಕ ಮೌಲ್ಯಗಳು ನಕಾರಾತ್ಮಕವಾಗಿ ಉದಯವಾಗುತ್ತವೆ.

ಮುಸ್ಲಿಂ ಕುಟುಂಬದಲ್ಲಿ ಬೆಳೆಸುವ ಈ ಪರಿ ಮುಖ್ಯವಾಗಿ ಆರ್ಥಿಕ ಶ್ರಮ ವಿಭಜನೆಯಿಂದ ರೂಪ ತಾಳಿದ್ದು, ಜೈವಿಕ ವ್ಯತ್ಯಾಸಗಳು ಪಕ್ಕಕ್ಕೆ ಸರಿಸುತ್ತವೆ. ಕುಟುಂಬದಲ್ಲಿ ಭಿನ್ನ ಪಾತ್ರಗಳ ವಿಂಗಡನೆಯಲ್ಲಿ ಬೆಳೆದಾಗ ಅದು ಜೀವನ ಪೂರ್ತಿ ನಡುವಳಿಗಾಗಿ ರೂಪ ತಾಳಬಹುದಾಗಿದೆ. ಈ ನಡವಳಿಗಳು, ರೂಢಿಗಳು ಸಾಮಾಜಿಕವಾಗಿ ಮಹಿಳೆಯರು ಮಂದಗತಿಯಲ್ಲಿ ಸಾಗುವಂತೆ ಮಾಡುತ್ತವೆ.

ಒಟ್ಟಿನಲ್ಲಿ ಬಹುಸಂಖ್ಯಾತ ಸ್ತ್ರೀಯ (ಮುಸ್ಲಿಂ, ಇತರೆ ಎಲ್ಲಾರೂ) ಪಾಲಿಗೆ ಧರ್ಮ ಪಾತ್ರವನ್ನು ನಿರ್ದೇಶಿಸುವಂತಹ ಒಂದು ಸಾಮಾಜಿಕ ನಿಯಂತ್ರಣ ವ್ಯವಸ್ಥೆಯಾಗಿ ಕಾರ್ಯ ನಿರ್ವಹಿಸುತ್ತಿತ್ತೆ ಹೊರತು, ಮತ್ತ್ಯಾವ ರೀತಿಯಲ್ಲೂ ಅವರ ಬದುಕಿನ ಮೇಲೆ ಪರಿಣಾಮ ಬೀರುವುದಿಲ್ಲ. ಹುಟ್ಟು, ವಿವಾಹ, ಶಿಕ್ಷಣ, ವೈಧವ್ಯ, ಸಾವು ಮುಂತಾದ ಸಂದರ್ಭಗಳಲ್ಲಿ ಸ್ತ್ರೀಯರು ಮಾಡಬಹುದಾದ ಅಥವಾ ಮಾಡಬಾರದಂಥ ಕೆಲಸಗಳ ಪಟ್ಟಿಯನ್ನೇ ಪ್ರತಿ ಧರ್ಮವೂ ಸೃಷ್ಟಿಸಿದೆ ಮನುಕುಲದ ಸೃಷ್ಟಿ ಹಾಗೂ ಪಾಲನೆ ಪೋಷಣೆಯನ್ನು ಹೊತ್ತ ಈ ಸ್ತ್ರೀಗೆ ಯಾವ ಧರ್ಮವೂ ಸಂಪೂರ್ಣ ಸ್ವಾತಂತ್ರವನ್ನು ನೀಡಿಲ್ಲ. ಅವಳಿಗೆ ನೀಡಿರುವ ಹಕ್ಕುಗಳು ಹಲವು, ಹೇರಿರುವ ನಿರ್ಭಂಧಗಳು ನೂರಾರು. ಇದು ಸ್ತ್ರೀಯರನ್ನು ಕುರಿತಂತೆ ಧರ್ಮ (ಮುಸ್ಲಿಂ) ತಳೆದಿರುವ ನಿಲುವಿಗೆ ಸಾಕ್ಷಿ.

ಸ್ವಲ್ಪ ಶಿಕ್ಷಣವನ್ನು ಪಡೆಯಬಹುದಾದರೂ ಸಹ, ಉದ್ಯೋಗ ಮಾಡಲೇಬೇಕು ಎನ್ನುವ ಒತ್ತಾಯವಿಲ್ಲ, ಇಷ್ಟಾನೂ ಇಲ್ಲ. ಅದು ಗಂಡಿನ ಸಾಮರ್ಥ್ಯಕ್ಕೆ ಅಸಮಾನ, ನಾವು, ನಮ್ಮ ಹೆಣ್ಣು ಮಕ್ಕಳಿಗೆ ಜೀವನವನ್ನು ನಡೆಸಲು ಗಂಡಿನ ಆಶ್ರಯವನ್ನು ಕಲ್ಪಿಸಿದ್ದೇವೆ. ಅವರಿಗೆ ನಾವು ಯಾವಾಗಲೂ ಬೆಂಗಾವಲು ಎನ್ನುವಂತೆ ಹೇಳುತ್ತಾರೆ. ಔದಾರ್ಯ, ಸ್ವಾತಂತ್ರ್ಯ, ಅವಕಾಶಗಳನ್ನು ನೀಡಿದಂತೆ ಮಾಡಿ, ಪರ್ದಾದಡಿಯಲ್ಲಿ ಹಲವಾರು ನಿರ್ಭಂಧಗಳನ್ನು ಹೇರಿರುವುದನ್ನು ಕಾಣಲಾಗಿದೆ.

ಮುಸ್ಲಿಂ ಧರ್ಮ ಸ್ತ್ರೀಯರಿಗೆ ನೀಡಿದ್ದಂಥ ಹಲವು ಹಕ್ಕುಗಳನ್ನು ಕೂಡ ಅವರು ಸಂಸಾರ ಎಂಬ ಸಾಂಸ್ಥಿಕ ಚೌಕಟ್ಟಿನ ಒಳಗೆ ಮಾತ್ರ ಅನುಭವಿಸಬೇಕು ಎನ್ನುವ ನಿರ್ಭಂಧವಂತೂ ಇದಿಂಗೂ ಆಚರಣೆಯಲ್ಲಿದ್ದೂ, ಬಹುಪಾಲು ಸ್ತ್ರೀಯರೂ ಈ ನಂಬಿಕೆಗೆ ಬದ್ಧರಾಗಿರುವುದು ದುರದೃಷ್ಟಕರ.

ಇಸ್ಲಾಂ ಧರ್ಮದಲ್ಲಿ ಸ್ತ್ರೀಯು ಪ್ರಧಾನ ಸಮಾಜಿಕ ವ್ಯವಸ್ಥೆ ಪ್ರಭಾವ ಪ್ರವಾದಿ ಮಹಮದ್ ಕಾಲದಲ್ಲಿಯೂ ಕಂಡು ಬಂದಂಥ ನಿದರ್ಶನಗಳೂ ಇವೆ. ಆದರೆ ಅವರ ಮರಣಾನಂತರ ಪರಿಸ್ಥಿತಿ ಪೂರ್ಣ ಸ್ವರೂಪದ

ಬದಲಾವಣೆಯನ್ನು ಕಂಡಿತು. ಮಾತೃ ಮೂಲದಿಂದ ಗುರ್ತಿಸಲ್ಪಡುತ್ತಿದ್ದ ವಂಶಾವಳಿ ಪಿತೃ ಮೂಲದಿಂದ ಗುತಿಸಲ್ಪಡಲು ಪ್ರಾರಂಭವಾದುದಷ್ಟೇ ಅಲ್ಲ. ಆಸ್ತಿ ಹಕ್ಕು ಗಂಡು ಸಂತಾನಕ್ಕೆ ಮಾತ್ರ ಸೀಮಿತವಾಯಿತು.

ಏಕ ಸಂಗಾತಿ ವಿವಾಹದ ನಿಯಮ ಸ್ತ್ರೀಗೆ ಮಾತ್ರ ಅನ್ವಯಿಸುವಂತಾಗಿ, ಪುರುಷ ಮಾತ್ರ ಓರ್ವ ಸಂಗಾತಿಗಿಂತ, ಹೆಚ್ಚಿನ ಸಂಖ್ಯೆಯ ಮಹಿಳೆಯರನ್ನು ವಿವಾಹವಾಗುವಂಥ ಪದ್ಧತಿ ಚಾರಿಯಲ್ಲಿದೆ, ಒಬ್ಬ ಪುರುಷ ಏಕಕಾಲದಲ್ಲಿ ನಾಲ್ಕು ಜನರೊಡನೆ ವಿವಾಹ ಮಾಡಿಕೊಳ್ಳಬಹುದು, ಆದರೆ ಈ ಸಂಖ್ಯೆಯು ಯಾವುದೇ ಸಂದರ್ಭದಲ್ಲಿ ನಾಲ್ಕಕ್ಕಿಂತ ಹೆಚ್ಚಾಗಬಾರದು, ಎಂಬ ನಿಯಮವಿದ್ದುದನ್ನು ಗಮನಿಸಬೇಕು, ಸಾಮಾಜಿಕ ಪರಿಸ್ಥಿತಿಯಲ್ಲಿ ಬಹುಪತ್ನಿತ್ವಕ್ಕೆ ಅವಕಾಶ ಕಲ್ಪಿತವಾದರೂ ಇದು ಕಡ್ಡಾಯವೇನಿಲ್ಲ ಇತ್ತೀಚೆಗಂತೂ ಹಲವು ಹಿಂದೂ ಪುರುಷರು ಇಸ್ಲಾಂ ಧರ್ಮಕ್ಕೆ ಮತಾಂತರ ಹೊಂದಿ ಮೊದಲ ಪತ್ನಿಯಿಂದ ವಿಚ್ಛೇದನವನ್ನು ಪಡೆಯದೆಯೆ ಮತ್ತೊರ್ವ ಹಿಂದೂ ಸ್ತ್ರೀಯನ್ನು ವಿವಾಹವಾಗಿರುವ ನಿದರ್ಶನಗಳು ನಮ್ಮ ಸಮಾಜದಲ್ಲಿದೆ.

ಹೀಗೆ ಸಾಮಾಜಿಕ ವ್ಯವಸ್ಥೆಯಲ್ಲಿ ಲಿಂಗತಾರಮ್ಯದ ಬಗ್ಗೆ ಹಿಂದಿನಿಂದ ಇಂದಿನ ದಿನಗಳಲ್ಲಿಯೂ ಸಹ ಅಸಮಾಧಾನದ ಬೆಳವಣಿಗೆಯನ್ನು ಕಾಣಬಹುದು. ಹಾಗೆಯೇ ಈ ಲಿಂಗತಾರತಮ್ಯದ ಬಲಿಷ್ಠ ಬೇರುಗಳು ಕುಟುಂಬ, ಶಿಕ್ಷಣದಂತಹ ವ್ಯವಸ್ಥೆಯೊಳಗೆ ಹೇಗೆ ವ್ಯಾಪಿಸಿಕೊಂಡಿವೆ ಎಂಬುದನ್ನು ಈ ಕೆಳಗಿನಂತೆ ತಿಳಿದುಕೊಳ್ಳಬಹುದು.

ಮಹಿಳೆಯರಿಗೆ ಶಿಕ್ಷಣದ ಅವಶ್ಯಕತೆ ಕೇವಲ ಯಾವುದೇ ಒಂದು ವರ್ಗದ, ಜಾತಿ, ಸಮುದಾಯದವರಿಗಿಲ್ಲ. ಪ್ರತಿಯೊಬ್ಬ ಮಹಿಳೆಗೂ ಸಹ ಯಾವುದೇ ಲಿಂಗ ಭೇದವಿಲ್ಲದೆ ಸಮಾನ ಶಿಕ್ಷಣವನ್ನು ದೊರಕಿಸಿಕೊಳ್ಳುವ ಅವಶ್ಯಕತೆ ಇದೆ.

ಇಂತಹ ಸಮಯದಲ್ಲಿ ಮುಸ್ಲಿಂ ಮಹಿಳೆಯರಿಗೂ ಸಹ ಲಿಂಗ ತಾರತಮ್ಯ ವ್ಯತ್ಯಾಸದಲ್ಲಿ ಯಾವ ಬಗೆಯಾಗಿ ದೃಷ್ಠಿಹಾಯಿಸಿದೆ ಎನ್ನುವುದನ್ನು ತಿಳಿದುಕೊಳ್ಳೋಣ.

**೨.೪. ಮುಸ್ಲಿಂ ಮಹಿಳೆಯ ಶಿಕ್ಷಣ**

ಸಾಮಾಜಿಕ ಸಂಸ್ಥೆಗಳಲ್ಲಿ ಶಿಕ್ಷಣವು ಒಂದು ಕ್ಷೇತ್ರವಾಗಿದ್ದು, ಮಾನವರ ಅವಶ್ಯ ಬದುಕಿನ ರೂಪರೇಷೆಗಳು, ಜ್ಞಾನ ಶಿಸ್ತುಗಳು ಕಲಿಸಿ ಕೊಡುತ್ತದೆ. ಮಾನವ ಮೃಗವನ್ನು ಮನುಷ್ಯರಾಗಿ ರೂಪಿಸಲು ಶಿಕ್ಷಣದ ತತ್ವಗಳು ಬಹುಮುಖ್ಯ ಪಾತ್ರವನ್ನು ವಹಿಸುತ್ತವೆ. ಇದರಲ್ಲಿ ಇತರ ಮಹಿಳಾ ಶಿಕ್ಷಣದ ಬಗ್ಗೆ ದೃಷ್ಠಿ ಹಾಯಿಸಿದಾಗ ಇತರ ಮಹಿಳೆಯರಿಗಿಂತ ಪ್ರತಿಶತದಲ್ಲಿ ಕಡಿಮೆ ಇರುವುದು ಗೋಚರಿಸುತ್ತದೆ.

ಮಹಿಳೆಯರಿಗೆ ಶಿಕ್ಷಣವು ಜ್ಞಾನ ಹಾಗೂ ತಿಳುವಳಿಕೆ ನೀಡುತ್ತದೆ, ಸಮಾಜದಲ್ಲಿ ಆದರ್ಶಪ್ರಾಯವಾಗಿ ಬದುಕಲು ಅಗತ್ಯವಾದ ಕೌಶಲ್ಯವನ್ನು ಕೊಡುತ್ತದೆ. ಎಲ್ಲಕ್ಕಿಂತ ಕುಟುಂಬ ಹಾಗೂ ಸಮಾಜದಲ್ಲಿ ಸಾಮರಸ್ಯ, ಶಾಂತಿ, ನೆಮ್ಮದಿ ನೆಲೆಸುವಂತೆ ಮಾಡಲು ಶಿಕ್ಷಣದ ಅವಶ್ಯಕತೆ ಪ್ರತಿ ಮಹಿಳೆಗೂ ಇದೆ. ಇದು ಯಾವುದೇ ಒಂದು ವರ್ಗದ ಮಹಿಳೆಗೆ ಸೀಮಿತವಲ್ಲ.

ಆದರೆ ಇಂತಹ ಒಂದು ಗುಣಾತ್ಮಕ ಪ್ರಕ್ರಿಯೆಗಳಿಗೆ ವಿರೋಧವಾದ ವ್ಯವಸ್ಥೆಯು ಮುಸ್ಲಿಂ ಕುಟುಂಬಗಳಲ್ಲಿ ನಿರ್ಮಾಣವಾಗಿರುತ್ತದೆ. ಶೈಕ್ಷಣಿಕ ಸೌಕರ್ಯಗಳಿಂದ ಮಹಿಳೆಯರನ್ನು ಸಂಪೂರ್ಣವಾಗಿ ಹೊರಗಿಟ್ಟು, ದಕ್ಕದಂತೆ ಮಾಡಿದ ಕ್ರೌರ್ಯ ಪುರುಷ ಕೇಂದ್ರಿತ ವ್ಯವಸ್ಥೆ ಹಾಗೂ ಸಂಪ್ರದಾಯ ಬದ್ಧ ಸಮುದಾಯ.

ಇಸ್ಲಾಂ ಧರ್ಮದಲ್ಲಿ ಪುರುಷರು ಸ್ತ್ರೀಯರನ್ನು ತಮಗೆ ಸಮಾನರಾದ ವ್ಯಕ್ತಿಗಳೆಂದು ಪರಿಗಣಿಸಿಲ್ಲ. ತಮಗಿಂತ ಬುದ್ಧಿವಂತಿಕೆಯುಳ್ಳ ಸ್ತ್ರೀಯರಿಗಿಂತ ತಮ್ಮನ್ನು ಎತ್ತರದಲ್ಲಿರಿಸಿಕೊಳ್ಳಬೇಕೆಂಬ ಅಸೂಯೆ, ಛಲದಿಂದ ಪುರುಷರು ಕ್ರಮೇಣ ಅವರ ಬುದ್ಧಿಹರಿತವಾಗದಂತೆ ಕಾಯ್ದುಕೊಂಡು ಬಂದಿದ್ದಾರೆ. ಹೀಗೆ ಮೂಲೆಗೊತ್ತರಿಸಲು ಶಿಕ್ಷಣ ರಹಿತರನ್ನಾಗಿ, ಅನಕ್ಷರಸ್ತರನ್ನಾಗಿಸಿ ಮಾಡಿದುದು ಮುಖ್ಯ ಕಾರಣ. ಇಂತಹ ಪ್ರಯತ್ನಗಳು ಕತ್ತಲೆಯ ಅಜ್ಞಾನದಲ್ಲಿರಿಸಿದವರೆಗೂ ಹಂತ ಹಂತವಾಗಿ ಈ ಶಿಕ್ಷಣವನ್ನು ಇಲ್ಲವಾಗಿಸುವ ದುಷ್ಟ ಯತ್ನ ಅವ್ಯಾಹತವಾಗಿ ನಡೆದಿದೆ, ನಡೆಯುತ್ತಿದೆ.

ಪಿತೃ ಪ್ರಧಾನ ವ್ಯವಸ್ಥೆ ಕುಟುಂಬದಲ್ಲಿ ಕಟ್ಟಿಹಾಕುವ ಕಟ್ಟುನಿಟ್ಟಾದ ನಿಯಮಗಳನ್ನು ರೂಪಿಸಿದೆ. ಸ್ತ್ರೀಯರನ್ನು ಗುಲಾಮಳನ್ನಾಗಿ ಮಾಡಿಕೊಂಡು ಪುರುಷರು ತಾನೇ ಶಕ್ತಿವಂತನೆಂದು ಸಾರಲು ಸ್ತ್ರೀಯರನ್ನು ನಿಯಂತ್ರಿಸಿದ್ದಾನೆ. ಗೃಹಿಣಿಯ, ಗೃಹಬಂಧತ್ವದ ಹಾಗೂ ಗೃಹಿಣಿತ್ವದ ಮೂಲಕ ಸ್ತ್ರೀಯರ ಅಸ್ಮಿತೆಯನ್ನು ಅಸ್ತಿತ್ವವನ್ನು ಹತ್ತಿಕ್ಕುವ ತಂತ್ರಗಳು ಲೆಕ್ಕವಿಲ್ಲದಷ್ಟು ನಡೆಯುತ್ತಿವೆ ಮುಸ್ಲಿಂ ಕುಟುಂಬಗಳಲ್ಲಿ.

ಇಸ್ಲಾಂ ಧರ್ಮದಲ್ಲಿಯೂ ಲೈಂಗಿಕತೆಯಿಂದ ಪುರುಷ ತನ್ನ ಪೌರುಷವನ್ನು ಸಾರುವ ಹೊತ್ತಿನಲ್ಲಿ, ತಾಯ್ತನವನ್ನು ವೈಭವೀಕರಿಸಿ ಅವಳ ಆಲೋಚನಾ ಲೋಕವನ್ನು ಸ್ಥಗಿತಗೊಳಿಸಿ ಹೆಣ್ಣನ್ನು ಸಂಕೋಲೆಯಲ್ಲಿ ಬಂಧಿಸಿದ್ದಾನೆ. ಆರ್ಥಿಕ ದಿಗ್ಬಂಧನ, ಲೈಂಗಿಕತೆಯ ದಿಗ್ಬಂಧನ ಹಾಗೂ ಗೃಹ ದಿಗ್ಬಂಧನಗಳಲ್ಲಿ ಸೆರೆಯಾಗಿ ಹೋದ ಹೆಣ್ಣಿನ ಬದುಕು ಸಂಪೂರ್ಣವಾಗಿ ಪುರುಷಾಧೀನವಾಯಿತು. ಅವಳ ಚೈತನ್ಯಕ್ಕೆ ಸ್ವತಂತ್ರ ಅಸ್ತಿತ್ವವೇ ಇಲ್ಲವಾಯಿತು.

ಇಂತಹ ಪ್ರಕ್ರಿಯೆಗಳು ಯಾವುದೇ ವರ್ಗ, ಜಾತಿಗೆ ಸೇರಿದ ಸ್ತ್ರೀಯೇ ಆಗಲಿ ಆಕೆಗೆ ಶಿಕ್ಷಣದ ಅವಕಾಶ, ಅನುಕೂಲ ಕಲ್ಪಿಸುವ ಆಸೆ ತೋರಿಸುತ್ತ ಒಳಗೊಳಗೇ ಆಕೆಯ ವ್ಯಕ್ತಿತ್ವದ ನಾಶ ಮಾಡುತ್ತಿರುವ ಪುರುಷ ಕೇಂದ್ರಿತ ಚಿಂತನೆಗಳು ಅವಳ ದ್ವಿಪಾತ್ರ ಸಮಸ್ಯೆಗೆ ಪರಿಹಾರ ನೀಡುವುದಿಲ್ಲ.

ವರದಕ್ಷಿಣೆ, ವಧು ದಹನ, ಕೌಟುಂಬಿಕ ದೌರ್ಜನ್ಯಗಳಿಂದ ಹೆಣ್ಣು ಮಕ್ಕಳನ್ನು ಘಾಸಿಗೊಳಿಸುತ್ತಾರೆ. ಶಿಕ್ಷಣದ ಭ್ರಮೆ ಹುಟ್ಟಿಸುವ ಮೂಲಕ ಸ್ತ್ರೀಯರ ವಾಸ್ತವ ಜೀವನದ ಶೋಷಣೆ ನಡೆಯುತ್ತಿದೆ.

ಲಿಂಗ ತಾರತಮ್ಯದ ಮಹಿಳೆಯ ಬೆಳವಣಿಗೆಯು ಎಲ್ಲಾ ಅವಕಾಶಕ್ಕೆ ಕುಂಠಿತವನ್ನೊಡ್ಡಲು ಮೂಲ ಕಾರಣವಾಗಿತ್ತು. ಶಿಕ್ಷಣವು ಮಹಿಳೆಗೆ ತಿಳುವಳಿಕೆ, ಲೋಕಜ್ಞಾನ ಮತ್ತು ಭವಿಷ್ಯದ ಅಡಿಪಾಯದ ಜೊತೆ ಸಮಾಜದಲ್ಲಿರುವ ಹಕ್ಕು ಭಾದ್ಯತೆಗಳ ಅರಿವು ಉಂಟಾಗುತ್ತದೆ. ನಿಜ ಆದರೆ ಬೆಳವಣಿಗೆಯು ೨ನೇ ದರ್ಜೆಯಾಗಿರುವುದರಿಂದ ತಮ್ಮ ಅರಿವಿನ ಮೂಲವು ಶಿಕ್ಷಣ ಕ್ಷೇತ್ರದ ವಂಚನೆಯಿಂದ ಅಂಧಕಾರದಲ್ಲಿ ತೊಳಲಾಡುವ ಹಾಗೆ ಹಾಗಿದೆ.

ಒಂದು ದೇಶದ ನಿಜವಾದ ಸಂಪತ್ತು ಎಂದರೆ ಇಲ್ಲಿ ನಾವು ಬುದ್ಧಿಜೀವಿಗಳು ಭಾರತದಲ್ಲಿ ಶಿಕ್ಷಣವು ಎಲ್ಲಾ ವರ್ಗಗಳಿಗೂ ಉಚಿತ ಹಾಗೂ ಕಡ್ಡಾಯವಾಗಿ ದುಡಿಯುವಂತ ಧ್ಯೇಯೋದ್ದೇಶಗಳನ್ನು ಸಂವಿಧಾನವು ಹೊಂದಿದೆ. ಆದ್ದರಿಂದಲೇ ಮೊದಲನೆ ಸ್ಥಿತಿಗೆ ಹೋಲಿಸಿದರೆ, ಪ್ರಸ್ತುತ ಶಿಕ್ಷಣ ಸ್ವಲ್ಪ ಉತ್ತಮ ಎನ್ನುವ ಬಗೆಯಲ್ಲಿ ಎಲ್ಲರಿಗೂ ಸಿಗುತ್ತದೆ. ಇದು ದಿನದಿಂದ ದಿನಕ್ಕೆ ಎಲ್ಲಾ ವರ್ಗಗಳ ಜನರಿಗೂ ಸಿಗುತ್ತದೆ. ಒಂದೆ ಕೇವಲ ಕೆಲವೇ ಕೆಲವು ವರ್ಗಗಳಿಗೆ ಮಾತ್ರ ಶಿಕ್ಷಣವು ಸೀಮಿತವಾಗಿತ್ತು. ಕೆಲ ಸಮುದಾಯಗಳಿಗೆ ಶಿಕ್ಷಣವು ದೂರವೇ ಇತ್ತು.

ಕೇವಲ ಉತ್ತಮ ವರ್ಗದ ಜನರಿಗೆ ಮಾತ್ರವೇ ಇದು ದೊರೆಯುತ್ತಿತ್ತು. ಮಹಿಳೆಗೆ ಹೋಲಿಸಿದರೆ ಅಂದು ಶಿಕ್ಷಣವು ದಯನೀಯ ಸ್ಥಿತಿಯಲ್ಲಿತ್ತು. ಉನ್ನತ ವರ್ಗಗಳಿಗೆ ಸೇರಿದ ಮಹಿಳೆಯಾಗಿದ್ದರೆ ಅವಳಿಗೆ ಅಲ್ಪ ಪ್ರಮಾಣದಲ್ಲಿ ಶಿಕ್ಷಣ ಸಿಗುತ್ತಿತ್ತು. ಇದರ ಪ್ರಮುಖ ಉದ್ದೇಶವೇನೆಂದರೆ ಅವಳ ಮನೆಯ ಉಳಿತಾಯ ಮತ್ತು ಆರ್ಥಿಕತೆಯನ್ನು ಸುಲಭವಾಗಿ ನಿಭಾಯಿಸಲಿ ಎನ್ನುವ ಅಂಶವು ಇದರಲ್ಲಿ ಅಡಕವಾಗಿತ್ತು. ಉನ್ನತ ವರ್ಗಗಳಿಗೆ ಸೇರಿದ ಮಹಿಳೆಯರದ್ದು ಈ ಪರಿಸ್ಥಿತಿಯಾದರೆ ಕೆಳ ಜಾತಿಯ ಅಥವಾ ಕೆಳ ಸಮುದಾಯದ ಮಹಿಳೆಯರ ಶಿಕ್ಷಣ ಸ್ಥಿತಿಯಂತೂ ಹೇಳತೀರದು ಮನುಷ್ಯರಿಗೆ ಅವರ ಜೀವನದಲ್ಲಿ ಧ್ಯೇಯೋದ್ದೇಶಗಳನ್ನು ಸಾಧಿಸುವ ಸಲುವಾಗಿ ಶಿಕ್ಷಣ ಅವಶ್ಯಕವಾಗಿ ಬೇಕು.

ಶಿಕ್ಷಣವು ಮನುಷ್ಯರನ್ನು ಅಜ್ಞಾನದ ಕತ್ತಲಿಂದ ಜ್ಞಾನದ ಬೆಳಕಿಗೆ ಕೊಂಡೊಯ್ಯುತ್ತದೆ ಎನ್ನುವ ಜಾನ್ ಡುಯಿ ಅವರ ಮಾತ್ತು ಇಲ್ಲಿ ತಕ್ಕಂತೆ ಅರ್ಥಪೂರ್ಣವಾಗಿದೆ. ಆದ್ದರಿಂದಲೇ ಶಿಕ್ಷಣ ಎಂಬುದು ಪ್ರತಿಯೊಬ್ಬರಿಗೂ ದೊರೆಯಲೇ ಬೇಕು. ಮುಖ್ಯವಾಗಿ ಕೆಳ ಸಮುದಾಯದವರಿಗೆ ಅದರಲ್ಲೂ ಸ್ತ್ರೀಯದವಳು ಶಿಕ್ಷಣ ಪಡೆಯುವ ಮೂಲಕ ತನ್ನ ಮೇಲಿನ ವಿವಿಧ ಸಮಸ್ಯೆಗಳು ಮತ್ತು ಶೋಷಣೆಗಳ ಬಗ್ಗೆ ಹಾಗೂ ಸಾಮಾಜಿಕ ನೈಸರ್ಗಿಕ ಹಕ್ಕುಗಳ ಬಗ್ಗೆ ಧ್ವನಿ ಎತ್ತಲು ಶಿಕ್ಷಣವು ಸಹಾಯಕವಾಗುತ್ತದೆ. ಅವು ಇಲ್ಲಿ ಮುಖ್ಯವಾಗಿ ಚರ್ಚಿಸಬೇಕಾಗಿರುವುದು ಮಹಿಳಾ ಶಿಕ್ಷಣ, ಅದರಲ್ಲೂ ಮುಸ್ಲಿಂ ಮಹಿಳೆಯರ ಬಗ್ಗೆ ಸ್ವತಂತ್ರ ಪೂರ್ವದಲ್ಲಿ ಮುಸ್ಲಿಂ ಮಹಿಳೆಯರಿಗೆ ಶಿಕ್ಷಣ ಎಂಬುದು ಕನಸಿನ ಮಾತೇ ಆಗಿತ್ತು. ಆದರೆ ಕೆಲವು ಉನ್ನತ ಸ್ಥರದ ಮುಸ್ಲಿಂ ಮಹಿಳೆಯರಿಗೆ ಸೀಮಿತ ಚೌಕಟ್ಟಿನಲ್ಲಿ ಶಿಕ್ಷಣವನ್ನು ನೀಡಲಾಗುತ್ತಿತ್ತು. ಕಾರಣ ಏನೆಂದರೆ, ಅವರು ಖುರಾನ್ ಪಠಿಸಲು ಸಹಾಯಕವಾಗಲೆಂದು ಆದರೆ ಕೆಳವರ್ಗದ ಮುಸ್ಲಿಂ ಮಹಿಳೆಯರಿಗೆ ಇದು ಸಹ ಸಿಗುತ್ತಿರಲಿಲ್ಲ.''

ನಮ್ಮ ದೇಶದ ನಿಜವಾದ ಆಸ್ತಿ ಎಂದರೆ, ಅಲ್ಲಿಯ ಮಾನವ ಸಂಪನ್ಮೂಲದ ಸಮರ್ಥ ಬಳಕೆ ಮತ್ತು ಶಿಕ್ಷಣ ಆಗಿರುವುದರಿಂದ ದೇಶದ ಪ್ರಗತಿ ಸಲುವಾಗಿ ಮುಸ್ಲಿಂ ಮಹಿಳೆಯರ ಪಾಲು ಯಾವುದೇ ಕೊಡುಗೆಯನ್ನು ನೀಡದೆ ಅಭಿವೃದ್ಧಿಯಿಂದ ದೂರವೇ ಉಳಿದಿದೆ. ಸಾಮಾಜಿಕ ಜೀವನದ ಪ್ರತಿಯೊಂದು ರಂಗಗಳ ಅಧಿಕಾರವನ್ನು ಪುರುಷನೇ ಪಡೆದುಕೊಂಡಿರುವದರಿಂದ ಅವನು ತನ್ನ ಹಿನ್ನಡೆಗೆ ಹಾಗೂ ತನ್ನ ಅಧಿಕಾರಕ್ಕೆ ಚ್ಯುತಿ ತರುವಂತಹ ಯಾವುದೇ ಕ್ಷೇತ್ರವಿರಲಿ ಅದಕ್ಕೆ ಮಹಿಳೆಯನ್ನು ಬರಲು ಬಿಡಲಾರ. ಆ ಕಾರಣದಿಂದಲೇ ಪಿತೃಪ್ರಧಾನ ವ್ಯವಸ್ಥೆಯ ಒಂದು ಯೋಜನೆಯಾಗಿಯೇ ಮಹಿಳಾ ಶಿಕ್ಷಣವು ಸಮಾಜದಲ್ಲಿ ಹಿನ್ನಡೆ ಸಾಧಿಸಲು ಕಾರಣವಾಗಿದೆ.

ಸ್ವತಂತ್ರ ಪೂರ್ವದಲ್ಲಿ ಇಸ್ಲಾಂ ಧರ್ಮದಲ್ಲಿ ಹಾಸು ಹೊಕ್ಕಾಗಿರುವ ಡಾಂಭಿಕ ನಿಲುವುಗಳು ಅವೈಚಾರಿಕ ನಂಬಿಕೆಗಳು ಅಂದಿನ ಮಹಿಳಾ ಶಿಕ್ಷಣ ಕುಂಠಿತವಾಗಿರಲು ಕಾರಣವಾಗಿದ್ದವು.

ಮುಸ್ಲಿಂರಲ್ಲಿ ಸಾಮಾನ್ಯವಾದ ನಂಬಿಕೆ ಎಂದರೆ ಮಹಿಳೆಯು ಶಿಕ್ಷಣ ಪಡೆದ ನಂತರ ಕೆಲಸವಾದರೂ ಏನು ಎಂಬ ಧೋರಣೆಗಳು ಇಂದಿಗೂ ಚಾಲ್ತಿಯಲ್ಲಿರುವ ಈ ಕಾರಣದಿಂದಲೇ ಅವರ ಶಿಕ್ಷಣಕ್ಕೆ ಒಳಗಾಗಿ ಮುಕ್ತವಾದ ದಾರಿ ಈ ಸಮಾಜದಿಂದ ರೂಪಿತವಾಗಿಲ್ಲ. ಪದವಿ ಹಂತದವರೆಗೆ ಕಡಿಮೆ ಪ್ರಮಾಣದಲ್ಲಾದರೂ ಮುಸ್ಲಿಂ ಮಹಿಳೆಯರಿಗೆ ಶಿಕ್ಷಣ ಪಡೆದರೂ ಸಹ ಅದು ಉರ್ದು ಮಾಧ್ಯಮದಲ್ಲೇ ಈ ಕಾರಣದಿಂದ ಅವರು ನಿರುದ್ಯೋಗ ಎಂಬ ಕೊಡುಗೆಗೆ ಬಲಿಯಾಗಿದ್ದಾರೆ. ಇದು ಸಹ ಅವಳ ಶಿಕ್ಷಣವನ್ನು ಕುಂಠಿತಗೊಳಿಸುವಲ್ಲಿ ಪರೋಕ್ಷವಾಗಿ ಸಹಾಯಕವಾಗಿದೆ. ಶಿಕ್ಷಣ ಎಂಬುದು ಒಂದು ವ್ಯವಸ್ಥೆಯನ್ನು ಮರು ರೂಪಿಸುವಂತಹ ಉನ್ನತ ನಂಬಿಕೆಯನ್ನು ಹೊಂದಿರುವುದರಿಂದ ಇದರ ಅಗತ್ಯ ಎಲ್ಲರಿಗೂ ಬೇಕೇ ಬೇಕು. ಆದರೆ ಇದು ಏಕಪಕ್ಷೀಯವಾಗಿ ಕಾರ್ಯವೆಸಗುತ್ತಿರುವುದು ಒಂದು ದುರಂತವೇ ಎನ್ನಬಹುದು.

ಅಧ್ಯಯನಕ್ಕೆ ಸಂಬಂಧಪಟ್ಟಂತೆ ಕ್ಷೇತ್ರಕಾರ್ಯದ ಒಂದು ಸಂದರ್ಭದಲ್ಲಿ ಮುಸ್ಲಿಂ ಸಮುದಾಯ (ಕುಟುಂಬ) ಗಳಲ್ಲಿ ಔಪಚಾರಿಕ ಶಿಕ್ಷಣ, ತಾಂತ್ರಿಕ ಉನ್ನತ ಶಿಕ್ಷಣವನ್ನು ನೀಡುವುದರಲ್ಲಿ ಹಿಂದೇಟು ಹಾಕುವುದರ ಬಗ್ಗೆ ಕೇಳಿದಾಗ ಆ ಕುಟುಂಬದ ಒಡತಿ ತಾಯಿಯೊಬ್ಬಳು, ತನ್ನ ಗಂಡ ಗಾರೆ ಕೆಲಸ ನಿರ್ವಹಿಸುತ್ತಿದ್ದು, ತಮ್ಮ ಹೆಣ್ಣುಮಕ್ಕಳನ್ನು ಒಳ ದುಡಿಮೆಗಳಿಗೆ ಶಾಲೆ ಬಿಡಿಸಿರುವುದು ಕಂಡು ಬಂದಿದೆ. ಗಂಡು ಮಕ್ಕಳು ಗ್ಯಾರೆಜ್‌ಗಳಲ್ಲಿ, ಇನ್ನಿತರ ಕೆಲಸಗಳಲ್ಲಿ ತೊಡಗಿದರೆ, ಹೆಣ್ಣು ಮಗಳು ಮನೆಯಲ್ಲಿ ದುಡಿಯುವಳು, ಅಂದರೆ ಅಡುಗೆ ಮಾಡುವುದು, ಮಕ್ಕಳನ್ನು ಪಾಲನೆ ಪೋಷಣೆ ಮಾಡುವುದು, ಇನ್ನಿತರ ಮನೆಯ ಎಲ್ಲಾ ಕೆಲಸ ಕಾರ್ಯಗಳನ್ನು ಮಾಡುವುದರಲ್ಲಿ ನೆರವಾಗುತ್ತಾರೆ.

ಜೊತೆಗೆ ಮುಸ್ಲಿಂ ಕುಟುಂಬಗಳು ಗರಿಷ್ಠ ಪ್ರಮಾಣದಲ್ಲಿ ಮಧ್ಯಮ ವರ್ಗಕ್ಕಿಂತ ಕೆಳವರ್ಗದವರ ಸಂಖ್ಯೆ ಕಂಡು ಬಂದಿದೆ. ಇವರಿಗೆ ಶಿಕ್ಷಣದ ಬಗ್ಗೆ ಹೆಚ್ಚೇನೂ ನಿರೀಕ್ಷೆಗಳಿಲ್ಲ, ಹಾಗೂ ಅತಿ ಸಂಪ್ರದಾಯಸ್ಥ ಕುಟುಂಬಗಳ ಸದಸ್ಯರ ಪ್ರಕಾರ, ಪ್ರಾಯಕ್ಕೆ ಬಂದ ತಮ್ಮ ಹೆಣ್ಣು ಮಕ್ಕಳು ಹುಡುಗರೊಡನೆ ಬೆರೆಯುವುದನ್ನು ನಿಷೇಧಿಸುವರು, ಅವರೊಂದಿಗೆ ಕೂಡಿ ಓದಬಾರದು, ಎಂದು ಶಾಲೆ ಬಿಡಿಸುವರು, ಪರ್ದಾ ವ್ಯವಸ್ಥೆಯು ಮುಸ್ಲಿಂ ಹೆಣ್ಣು ಮಕ್ಕಳನ್ನು ಪ್ರತ್ಯೇಕವಾಗಿಡುತ್ತದೆ ಎಂದು ತಿಳಿದುಕೊಳ್ಳಲಾಗಿದೆ.

ಹೊಸಪೇಟೆಯ ಬಸವೇಶ್ವರ ನಗರದ ಮಸೀದಿಯೊಂದರ ಮೌಲ್ವಿಗಳ ಮಾತುಗಳನ್ನು ಅನುಲಕ್ಷಿಸಿದಾಗ, ಮುಸ್ಲಿಂ ಔಪಚಾರಿಕ ಶಿಕ್ಷಣಕ್ಕಿಂತ ಅನೌಪಚಾರಿಕ ಶಿಕ್ಷಣಕ್ಕೆ ಹೆಚ್ಚಿನ ಮಹತ್ವ ಕೊಡುತ್ತೇವೆ. ಈ ಅನೌಪಚಾರಿಕ ಶಿಕ್ಷಣ ಮದರಸಾಗಳ ಮುಖಾಂತರ ಪಡೆಯಬೇಕು, ಅಲ್ಲಿ ಮುಸ್ಲಿಂ ಖುರಾನಿನ ಪಠಣ ಮಾಡಲಾಗುತ್ತೇ, ಹೀಗಾಗಿ ಶಾಲೆಗೆ ಕಳಿಸುವುದು ವ್ಯರ್ಥ, ಎಂದು ಶಾಲೆ ಬಿಡಿಸಿ, ಕೇವಲ ಮದರಸಾಗಳಲ್ಲಿ ಮಾತ್ರ ಶಿಕ್ಷಣ ಪಡೆದರೆ ಸಾಕು, ಎನ್ನುವಂತಹ ನಂಬಿಕೆಯಲ್ಲಿ ಇದ್ದಾರೆ.

ಹಾಗೆಯೇ ಇದೇ ಹೊಸಪೇಟೆಯ ಒಬ್ಬ ವಿದ್ಯಾವಂತ ಬಿ.ಕಾಂ. ಪದವಿಧರ ವ್ಯಕ್ತಿ ಉಮರ್ ಖಾನ್ ಎಂಬುವರು ತಮ್ಮ ಮನೆಯಲ್ಲಿನ ನೈಜ ಸ್ಥಿತಿಯನ್ನೇ ಮುಂದಿಟ್ಟಾಗ ಖೇದವೆನಿಸಿತು. ಸ್ವತಃ ಒಬ್ಬ ಪದವಿಧರರಾದ ಇವರಿಗೆ ಹೆಣ್ಣು ಮಕ್ಕಳ ಶಿಕ್ಷಣದ ಬಗ್ಗೆ ವಿಶಾಲವಾದ ವಿಚಾರಗಳೇ ಇಲ್ಲದಿರುವುದೇ ಕಂಡು ಬಂದಿದೆ. ಇವರು ತಮ್ಮ ಹೆಣ್ಣುಮಕ್ಕಳನ್ನು ಕನ್ನಡ ಮಾಧ್ಯಮವನ್ನು ಏಳನೇ ತರಗತಿಯವರೆಗೆ ಮಾತ್ರ ಓದಿಸಿದ್ದು, ಅದರ ನಂತರ ಕೇವಲ ಸಾಂಪ್ರದಾಯಿಕ ಶಿಕ್ಷಣಕ್ಕೆ ಸೀಮಿತವಾಗಿರಿಸಿರುವುದು ತಿಳಿಸಿದರು.

ಸಾಂಪ್ರದಾಯಿಕ ಶಿಕ್ಷಣಕ್ಕೆ ಹೊರತಾಗಿ ವೃತ್ತಿ ಶಿಕ್ಷಣವನ್ನು ಅಥವಾ ಉನ್ನತ ಮಟ್ಟದ ಶಿಕ್ಷಣ, ಕಾಲೇಜು ಶಿಕ್ಷಣವನ್ನು ನಿರಾಕರಿಸುವುದಕ್ಕೇ ಕಾರಣವನ್ನು ಆಕೆ ಸಹ ಹೇಳಿದರು, ಅದೇನೆಂದರೆ, ಇಬ್ಬರು ಹುಡುಗಿಯರು ಕಾಚೇಜಿಗೆ ಹೋಗುತ್ತಿರುವಾಗ, ಅವರಲ್ಲಿ ಒಬ್ಬ ಹುಡುಗಿ ಯಾರನ್ನಾದರೂ ಪ್ರೀತಿಸಿದರೆ, ಆ ಒಂದು ಗುಣ ಇನ್ನೊಂದು ಹುಡುಗಿಯ ಮೇಲೂ ಪ್ರಭಾವ ಬೀರುವ ಆತಂಕವನ್ನು ವಿವರಿಸಿದರು. ಇದಕ್ಕಾಗಿಯೇ ನಮ್ಮ ಮಕ್ಕಳಿಗೆ ನಾವು ಕಾಲೇಜು ಮಟ್ಟದ ಶಿಕ್ಷಣ ಕೊಡಿಸಿಲ್ಲ ಎಂದು ಹೇಳಿದರು.

''ಒಟ್ಟಿನಲ್ಲಿ ಮುಸ್ಲಿಂರು ಶೈಕ್ಷಣಿಕವಾಗಿ ಹಿಂದುಳಿಯಲು ಹಲವಾರು ಕಾರಣಗಳಿದ್ದು, ಅವುಗಳು ಇಂತಿವೆ, ಭೀಕರ ಬಡತನ, ಶಿಕ್ಷಣದ ಪ್ರಾಮುಖ್ಯತೆಯ ಅಜ್ಞಾನ, ಶಿಕ್ಷಣ ಮತ್ತು ಉದ್ಯೋಗವಕಾಶಗಳು ಬಗೆಗೆ ಸಮೂಹದಲ್ಲಿ ತಿಳುವಳಿಕೆ ಹುಟ್ಟಿಸದಿರುವುದು, ಶಿಕ್ಷಣ ಒಂದು ದುಬಾರಿ ವೆಚ್ಚದ್ದು ಎಂದು ತಪ್ಪು ತಿಳುವಳಿಕೆ ಹಾಗೂ ಶಿಕ್ಷಣ ಪ್ರಚೋದನೆ ಮತ್ತು ಪ್ರೋತ್ಸಾಹ ಇಲ್ಲದಿರುವುದು, ಹೀಗಾಗಿ ಮುಸ್ಲಿಂರ ಶೈಕ್ಷಣಿಕ ಮಟ್ಟ ಸುಧಾರಿಸಲು ಮುಸ್ಲಿಂ ಸಂಘಟನೆಗಳು ಯಾವ ಪಾತ್ರವಹಿಸಬೇಕು ಎಂದು ತಿಳಿಯಬೇಕಿದೆ.''[೬]

ಸಮುದಾಯದ ಪ್ರತಿಯೊಬ್ಬ ಮುಸ್ಲಿಂ ಮಹಿಳೆಯೂ ಸುಶಿಕ್ಷಿತವಾಗಬೇಕು, ಸ್ತ್ರೀಯ ವಿದ್ಯಭ್ಯಾಸ, ಇಂದು ಅನಿವಾರ್ಯದ ಅಂಶವಾಗಿದ್ದು, ಸ್ತ್ರೀ ಶಿಕ್ಷಣದ ಕುರಿತಾದ ಎರಡನೆ ದರ್ಜೆಯ ನೋಟ ಮುಸ್ಲಿಂ ಸಮುದಾಯದಿಂದ ಮಾಯವಾಗಬೇಕು, ಒಬ್ಬ ಸ್ತ್ರೀಯು ಸುಶಿಕ್ಷಿತವಾದರೆ ಒಂದು ಸಮುದಾಯವೇ ಸುಶಿಕ್ಷಿತವಾದಂತೆ ಎಂಬ ಮಾತಿನ ಮಹತ್ವವನ್ನು ಮುಸ್ಲಿಂ ಸಮುದಾಯ ಕೂಡಲೇ ಅರಿಯಬೇಕಾಗಿರುವ ಅನಿವಾರ್ಯತೆಯಿದೆ.

ವ್ಯವಸ್ಥೆಯ ಆಶಯಗಳಿಗೆ ಅನುಕೂಲತೆಗಳಿಗೆ ತನ್ನನ್ನು ತಾನು ಬಲಿಯಾಗಿಸಿಕೊಳ್ಳುವುದರಲ್ಲಿಯೇ ಸುಖವನ್ನು ಅನುಭವಿಸಿದ್ದಾಳೆ ಕೌಟುಂಬಿಕ ನೆಮ್ಮದಿಗಾಗಿ ಸಮಷ್ಠಿಯ ಒಳತಿಗಾಗಿ ನಿರಂತರವಾಗಿ ಹೆಣಗಾಡುತ್ತಾ ಅನುಭವಿಸಿದ ಆಕೆಯ ಅವ್ಯಕ್ತ ಬೇಗುದಿಗಳು ಅಸಹಜವಾದದು.

ಹಿಂದೂ ಹಾಗೂ ಇತರ ಧರ್ಮಗಳ ಮಹಿಳೆಯರಿಗೆ ಹೋಲಿಸಿದರೆ ಮುಸ್ಲಿಂ ಮಹಿಳೆಯು ಶಿಕ್ಷಣಕ್ಕೆ ಮುಖಾ ಮುಖಿಯಾಗಿರುವುದು ತೀರಾ ಕಡಿಮೆ ಎನ್ನಬಹುದು. ಏಕೆಂದರೆ ಅವರ ಮೇಲಿನ ಒತ್ತಡಗಳು ಹಾಗೂ ಧಾರ್ಮಿಕ ನಿಲುವುಗಳಿಂದ ಅವಳು ಶಿಕ್ಷಣದಿಂದ ವಂಚಿತಳಾಗುತ್ತಾ ಬಂದಿದ್ದಾಳೆ. ಅವಳಿಗೆ ಶಿಕ್ಷಣ ನೀಡಿದರೆ ಜಾಗತೀಕರಣದಂತಹ ಪರಿಸ್ಥಿತಿಗೆ ಬಲಿಯಾಗಿ ಅವಳ ಆಚಾರ, ವಿಚಾರ, ಧಾರ್ಮಿಕ ನಂಬಿಕೆಗಳು ಎಲ್ಲಿ ಬದಲಾಗುತ್ತವೆಯೋ ಎಂಬ ನಂಬಿಕೆಯಿಂದ ಅವಳಿಗೆ ಶಿಕ್ಷಣ ಪಡೆದಂತಹ ಮಹಿಳೆಯರಿಗೆ ಮುಸ್ಲಿಂ ಮಹಿಳೆಯರ ಪಾಲು ಶೇಕಡಾ ೭ ಕ್ಕಿಂತ ಕಡಿಮೆ ಎಂಬ ಅಂಶವು ಈ ಸಮುದಾಯದಲ್ಲಿ ಅಡಗಿರುವಂತಹ ಶಿಕ್ಷಣದ ಬಗೆಗಿನ

ನಿರ್ಲಕ್ಷ್ಯವನ್ನು ಎತ್ತಿ ತೋರುತ್ತದೆ. ನಾಗರೀಕ ಪ್ರಪಂಚವು ಅತ್ಯಂತ ಮುಂದುವರೆಯುತ್ತಿದ್ದು, ಅದಕ್ಕೆ ತಕ್ಕಂತೆ ಮಹಿಳೆಯ ಜೀವನ ಶೈಲಿ ಆಚಾರ ವಿಚಾರಗಳು ಬದಲಾಗುತ್ತಿದ್ದು, ಅವಳು ಪ್ರತಿಯೊಂದು ಕ್ಷೇತ್ರಗಳಲ್ಲಿ ಪುರುಷನಿಗೆ ಸರಿಸಮಾನವಾಗಿ ತೊಡಗಿಸಿಕೊಂಡಿದ್ದು ಇವುಗಳ ಪರಿವೇ ಇಲ್ಲದಂತೆ ಮುಸ್ಲಿಂ ಮಹಿಳೆಯ ಶಿಕ್ಷಣದ ಬಗ್ಗೆ ಇಂದಿಗೂ ಅವೈಚಾರಿಕ ನಿಲುವುಗಳನ್ನೇ ಹೊಂದಿವೆ.

ಪ್ರಾಥಮಿಕ ಶಾಲೆಗಳಿಗೆ ದಾಖಲಾಗುವ ಬಾಲಕಿಯರ ಸಂಖ್ಯೆಯಲ್ಲಿ ಮುಸ್ಲಿಂ ಬಾಲಕಿಯರ ಪಾಲು ಅತ್ಯಂತ ಕಡಿಮೆ ಇದ್ದು. ಇದು ಪ್ರೌಢಶಾಲಾ ಹಂತದಲ್ಲಿ ಇದಕ್ಕಿಂತ ಕುಸಿಯುತ್ತದೆ. ಅವೈಚಾರಿಕ ಅಜ್ಞಾನ ಮೂಢನಂಬಿಕೆ, ಧಾರ್ಮಿಕ ವಿಚಾರಗಳಿಗೆ ಇಂದಿನ ಆಧುನಿಕ ಯುಗದಲ್ಲೂ ಜೋತು ಬಿದ್ದಿರುವ ಮುಸ್ಲಿಂ ಸಂಪ್ರದಾಯಸ್ಥ ಮನಸ್ಸುಗಳು ಮುಸ್ಲಿಂ ಮಹಿಳೆಯ ಉನ್ನತಿಯನ್ನು ಯಾವುದೇ ವಿಧದಲ್ಲೂ ಸಹಿಸಲಾರವು, ಕಾರಣ ಎಂದರೆ ಸಮಾಜದಲ್ಲಿ ಅವಳಿಗೆ ಉನ್ನತ ಸ್ಥಾನ ದೊರೆಯಬೇಕೆಂಬ ಭಾವನೆಗಳು ಇವರಿಗೆ ಜೀರ್ಣಿಸಿಕೊಳ್ಳಲು ಅಸಾಧ್ಯವಾಗಿದೆ.

ಪ್ರಾಥಮಿಕ ಹಂತದಲ್ಲಿ ಅವಳಿಗೆ ಅಲ್ಪ ಪ್ರಮಾಣದ ಶಿಕ್ಷಣದ (೨ ೫) ವರ್ಷವನ್ನು ಮದರಸಾಗಳ ಮೂಲಕ ನೀಡಲಾಗುತ್ತದೆ. ಇದರ ಪ್ರಮುಖ ಉದ್ದೇಶವೇನೆಂದರೆ, ಅವಳು ದಿನನಿತ್ಯದ ಜೀವನದಲ್ಲಿ ಖುರಾನ್‌ನನ್ನು ಪಠಿಸಲಿ ಎಂಬುದೇ ಇದರ ಪ್ರಮುಖ ಉದ್ದೇಶವಾಗಿದೆ. ಇದೇ ನಿಲುವು ಪ್ರತಿಯೊಂದು ಸಂಪ್ರದಾಯಸ್ಥ ಮುಸ್ಲಿಂ ಸಮುದಾಯಗಳಲ್ಲಿ ಅಡಗಿಕೊಂಡಿವೆ. ಆದರೆ ಇದಕ್ಕೆ ಅಪವಾದ ಎಂಬಂತೆ ಕೆಲವು ಉದಾರವಾಗಿ ಮುಸ್ಲಿಂರು ತಮ್ಮ ಮಗಳಿಗೆ ಉನ್ನತ ಹಂತದವರೆಗೆ ಶಿಕ್ಷಣವನ್ನು ನೀಡುತ್ತಿದ್ದಾರೆ. ಆದರೂ ಇತರ ಧರ್ಮಗಳ ಮಹಿಳೆಯರು ತೊಡಗುತ್ತಿರುವ ಉನ್ನತ ಹಂತದ ಶಿಕ್ಷಣಕ್ಕೆ ಹೋಲಿಸಿದರೆ ಇದು ಅತ್ಯಲ್ಪ ಪ್ರಮಾಣದಲ್ಲಿ ೨೦೦೧ ರ ಜನಗಣತಿ ಪ್ರಕಾರ ಉನ್ನತ ಶಿಕ್ಷಣಕ್ಕೆ ದಾಖಲಾಗುತ್ತಿರುವ ಮಹಿಳೆಯ ಸಂಖ್ಯೆಗೆ ಹೋಲಿಸಿದರೆ ಮುಸ್ಲಿಂ ಮಹಿಳೆಯರ ಪಾಲು ಶೇಕಡ ೩ ಕ್ಕಿಂತ ಕಡಿಮೆ.

ಮುಸಲ್ಮಾನರಲ್ಲಿ ಶಿಕ್ಷಣದಿಂದ ವಂಚಿತರಾದ ಮಹಿಳೆಯರ ಸಂಖ್ಯೆ ಅಧಿಕ, ಬಡತನ, ಮೌಢ್ಯ, ಹಾಗೂ ಅನಕ್ಷರತೆ ಒಂದಕ್ಕೊಂದು ಸಂಬಂಧವುಳ್ಳವು. ಹೆಣ್ಣು ಹೊಸಿಲು ದಾಟಿದರೆ, ಕೆಡಬಹುದೆನ್ನುವ ಭೀತಿ, ಅಧಿಕ ಮಕ್ಕಳ ಕಾರಣದಿಂದಾಗಿ ಬಡತನ, ಹೆಣ್ಣಿಗೆ ಓದಿನ ಅಗತ್ಯವಿಲ್ಲವೆನ್ನುವ ಮೌಢ್ಯ ಇವು ಮಹಿಳಾ ಶಿಕ್ಷಣಕ್ಕಿರುವ ಪ್ರಮುಖ ಅಡ್ಡಿಗಳು, ಹೆಣ್ಣು ಮಕ್ಕಳು ಇತ್ತೀಚಿಗಿನ ವರ್ಷಗಳವರೆಗೂ ಈ ಬಲೆಯಲ್ಲಿ ಸಿಕ್ಕು ಶಿಕ್ಷಣದಿಂದ ವಂಚಿತರಾಗಿದ್ದಾರೆ.

ಹೆಣ್ಣು ನಾಲ್ಕು ಅಕ್ಷರ ಕಲಿತು ಲೋಕಜ್ಞಾನ ಬೆಳೆಸಿಕೊಂಡರೆ ತನ್ನ ಸ್ಥಿತಿಯನ್ನು ಅರಿಯಲು ಸಾಧ್ಯವಾಗಿ ತಿರುಗಿ ಬೀಳಬಹುದೆನ್ನುವ ಹೆದರಿಕೆ ಸಮಾಜದ್ದು, ಅದಕ್ಕಾಗಿ ಅವರನ್ನು ಅಜ್ಞಾನದ ಕತ್ತಲಲ್ಲಿಟ್ಟು, ಶೋಷಿಸುತ್ತಾ ಜಾಣತನದಿಂದ ಹೆಂಗಸು ಓದಿ ಬರೆದರೆ ತಲೆಗೆ ಪಾಪ ಸುತ್ತಿಕೊಳ್ಳುತ್ತದೆ ಎನ್ನುವ ಭಯವನ್ನು ಹೆಂಗಸರ ಮನದಲ್ಲಿ ಮೂಡಿಸುವ ಕೆಲಸ ವ್ಯವಸ್ಥಿತವಾಗಿ ನಡೆಯುತ್ತಾ ಬಂದಿದೆ.

ಮುಸ್ಲಿಂ ಹೆಣ್ಣು ಮಕ್ಕಳು ಶಿಕ್ಷಣ ಪಡೆಯಲು ಎಷ್ಟೊಂದು ಅಡ್ಡಿ ಆತಂಕಗಳನ್ನು ಎದುರಿಸಬೇಕಾಗಿತ್ತು ಎನ್ನುವುದನ್ನು ಮುಸ್ಲಿಂ ಹುಡುಗಿ ಶಾಲೆ ಕಲಿತದ್ದು ಎನ್ನುವ ಆತ್ಮಕಥನದಲ್ಲಿ ಸಾರಾ ಅಬೂಬಕರ್ ವಿಷಾದಪಡಿಸಿದ್ದಾರೆ. ಹೆಣ್ಣುಮಕ್ಕಳಿಗಾಗಿಯೇ ಪ್ರತ್ಯೇಕವಾದ ಶಿಕ್ಷಣ ಸಂಸ್ಥೆಗಳಿರುವ ನಗರ ಪ್ರದೇಶದಲ್ಲಿ ಅವರಿಗೆ ಶಿಕ್ಷಣದ ಅವಕಾಶ ಗ್ರಾಮಾಂತರದಲ್ಲಿರುವ ಮುಸ್ಲಿಂ ಹುಡುಗಿಯರಿಗೆ ಸಿಗುವುದಿಲ್ಲ.

ಕೆಳವರ್ಗಕ್ಕೆ ಸೇರಿದ ಮುಸಲ್ಮಾನ ಮಕ್ಕಳು ಈಗಲೂ ಶಿಕ್ಷಣದಿಂದ ವಂಚಿತರು ನಗರ ಪ್ರದೇಶದಲ್ಲಿ ಕೂಡ ಪ್ರೌಢ ಶಾಲೆಯ ಶಿಕ್ಷಣ ಮುಗಿಸುವವರ ಸಂಖ್ಯೆ ಇತರರಿಗೆ ಹೋಲಿಸಿದರೆ ಕಡಿಮೆ. ಗ್ಯಾರೇಜ್‌ಗಳಲ್ಲಿ ಕುಲುಮೆಗಳಲ್ಲಿ ಕೆಲಸ ಮಾಡುವ ಬಾಲಕಾರ್ಮಿಕರಲ್ಲಿ ಮುಸ್ಲಿಂ ಕಾರ್ಮಿಕ ಮಕ್ಕಳ ಸಂಖ್ಯೆ ಗಣನೀಯ ಪ್ರಮಾಣದಲ್ಲಿರುವುದನ್ನು ಕಾಣಬಹುದು. ಇಂಥ ಪರಿಸ್ಥಿತಿಯಲ್ಲಿ ಬಡ ಕುಟುಂಬದ ಮುಸಲ್ಮಾನ ಹುಡುಗಿಯರಿಗೆ ಓದು ತೀರಾ ಕೈಗೆಟುಕದ್ದು. ಅನಕ್ಷರತೆಯ ಜೊತೆಗೆ ಅಜ್ಞಾನವೂ ಸೇರಿ ಚಿಕ್ಕ ವಯಸ್ಸಿನಲ್ಲಿ ವಿವಾಹ ಬಂಧನಕ್ಕೆ ಒಳಗಾಗುವ ಹುಡುಗಿಯರ ಬಹುಪತ್ನಿತ್ವ ಹಾಗೂ ತಲಾಖ್‌ನಂತಹ ಧಾರ್ಮಿಕ ಉರುಳಿಗೆ ಸಿಕ್ಕು ಬದುಕೆಲ್ಲ ಅಗ್ನಿಕುಂಡದಲ್ಲಿ ಬೇಯುವುದು ಸಾಮಾನ್ಯವಾಗಿ ಬಿಟ್ಟಿದೆ.

ಧಾರ್ಮಿಕ ಮತ್ತು ಲೌಕಿಕ ಶಿಕ್ಷಣ ಪಡೆಯಲು ಸ್ತ್ರೀಯರಿಗೆ ಅನುಮತಿ ನೀಡಲಾಗಿರುವುದು ಮಾತ್ರವಲ್ಲ. ಸ್ತ್ರೀ ಶಿಕ್ಷಣಕ್ಕೂ ಪುರುಷರ ಶಿಕ್ಷಣದಷ್ಟೇ ಮಹತ್ವವನ್ನು ಇಸ್ಲಾಂ ಕಲ್ಪಿಸಿದೆ. ಪುರುಷರಂತೆ ಸ್ತ್ರೀಯರೂ ಪ್ರವಾದಿ ಮಹ್ಮದ್ ಅವರಿಂದ ಧಾರ್ಮಿಕ ಮತ್ತು ನೈತಿಕ ಶಿಕ್ಷಣವನ್ನು ಪಡೆಯುತ್ತಿದ್ದರು. ಆದರೆ ಸ್ತ್ರೀಯರ ಶಿಕ್ಷಣಕ್ಕಾಗಿ ಪ್ರತ್ಯೇಕ ವ್ಯವಸ್ಥೆಯನ್ನು ಮಾಡಲಾಗಿತ್ತು.

ಶಿಕ್ಷಣ ತರಬೇತಿಗಳನ್ನು ನೀಡುವುದರಲ್ಲಿ ಸ್ತ್ರೀ ಪುರುಷರಲ್ಲಿ ಬೇಧಭಾವ ಮಾಡಬಾರದೆಂದು ಇಸ್ಲಾಂ ಸ್ಪಷ್ಟಪಡಿಸುತ್ತದೆ. ಆದರೆ ಸ್ತ್ರೀ ಪುರುಷರಿಗೆ ಒಂದೇ ರೀತಿಯ ಶಿಕ್ಷಣ ತರಬೇತಿಯನ್ನು ನೀಡಬೇಕೆಂದು ಮಾತ್ರ ಅದು ಬಯಸುವುದಿಲ್ಲ. ಇಸ್ಲಾಂನ ದೃಷ್ಟಿಯಲ್ಲಿ ಸ್ತ್ರೀಯನ್ನು ಉತ್ತಮ ಮಗಳಾಗಿಯೂ, ಸೋದರಿಯಾಗಿಯೂ, ಗೃಹಿಣಿಯಾಗಿಯೂ, ಮಾತೆಯಾಗಿಯೂ ಮಾರ್ಪಡಿಸುವ ಶಿಕ್ಷಣವೇ ಉತ್ಕೃಷ್ಟ ಶಿಕ್ಷಣವೆನಿಸಿದೆ.

ಅವಳ ಕಾರ್ಯಕ್ಷೇತ್ರವು ಮನೆಯೇ ಎಂಬುದನ್ನು ಮರೆಯಬಾರದು, ಆದ್ದರಿಂದ ಆ ಕ್ಷೇತ್ರದಲ್ಲಿ ಆಕೆ ಹೆಚ್ಚು ಉಪಯುಕ್ತ ಮತ್ತು ದಕ್ಷಳಾಗುವಂತೆ ಮಾಡುವ ಶಿಕ್ಷಣವೇ ಆಕೆಯ ಮಟ್ಟಿಗೆ ಹೆಚ್ಚು ಪರಿಣಾಮಕಾರಿಯಾಗಿದೆ. ಮಾತ್ರವಲ್ಲ ಆಕೆ ನೈತಿಕತೆ, ಸಂಸ್ಕೃತಿ, ಇತಿಹಾಸ, ಆರೋಗ್ಯ, ಜ್ಞಾನ, ವಿಜ್ಞಾನಗಳಲ್ಲಿಯೂ ಉತ್ತಮ ತಿಳುವಳಿಕೆ ಹೊಂದಿ ಉತ್ತಮ ಗೃಹಿಣಿಯ ಜೊತೆಗೆ ಉತ್ತಮ ಪ್ರಜೆಯೂ ಉತ್ತಮ ನಾಗರಿಕಳೂ ಆಗುವಂತೆ ಮಾಡುವ ಶಿಕ್ಷಣ ಆಕೆಗೆ ಅಗತ್ಯವಾಗಿದೆ. ಅವರವರಿಗೆ ಅಭಿರುಚಿ ಇರುವ ಇತರ ವಿಜ್ಞಾನ ಕ್ಷೇತ್ರದಲ್ಲಿಯೂ ಹೆಚ್ಚಿನ ವ್ಯಾಸಂಗ ಮಾಡಲು ಅವಕಾಶ ಮಾಡಿಕೊಡಬೇಕು, ಆದರೆ ಶಿಕ್ಷಣ ಪಡೆಯುವಾಗ ಅವರು ಇಸ್ಲಾಂನಲ್ಲಿ ಸ್ಪಷ್ಟಪಡಿಸಲಾಗಿರುವ ನೈತಿಕ ಮತ್ತು ಸಾಮಾಜಿಕ ನಿಯಮಗಳನ್ನು ಪಾಲಿಸಬೇಕಾದುದು ಅಗತ್ಯ.

ವಕೃ ಉಮರ್ ಖಾನ್ ಹಾಗೂ ಮುಸ್ತಫಾ ಹೇಳುವಂತೆ ನಮ್ಮ ಹಣ್ಣು ಮಕ್ಕಳಿಗೆ ಓದಿ ಸಂಪಾದನೆ ಮಾಡುವಷ್ಟು ವಿದ್ಯಾಭ್ಯಾಸದ ಅಗತ್ಯವಿಲ್ಲ, ಹಾಗೂ ಅವರು ಮನೆಯಲ್ಲಿದ್ದುಕೊಂಡು ಸಮಸ್ತ ಜವಾಬ್ದಾರಿ ಅಂದರೆ ಗಂಡ,

ಮಕ್ಕಳು, ಇತರ ಸದಸ್ಯರ ಬಗ್ಗೆ ಕಾಳಜಿ ವಹಿಸಿದರೆ ಸಾಕು, ಗಂಡಸರು ದುಡಿದು ತಂದು ಹಾಕುತ್ತಾರೆ ಎಂದು ಹೇಳುತ್ತಾರೆ.

**೨.೪.೧. ಮುಸ್ಲಿಂ ಮಹಿಳೆಯ ಪ್ರತ್ಯೇಕ ಶಿಕ್ಷಣ ವ್ಯವಸ್ಥೆ**

ಪ್ರಾಥಮಿಕ ಮಟ್ಟದಲ್ಲೇ ಬಾಲಕಿಯರಿಗೆ ಪ್ರತ್ಯೇಕ ಶಿಕ್ಷಣ ವ್ಯವಸ್ಥೆಯನ್ನು ಏರ್ಪಡಿಸಬೇಕಾದುದು ಇಸ್ಲಾಂ ಬೇಡಿಕೆಯಾಗಿದೆ. ಕನಿಷ್ಟ ಪಕ್ಷ ಪ್ರೌಢಶಾಲಾ ಮಟ್ಟದಲ್ಲಾದರೂ ಬಾಲಕಿಯರಿಗೆ ಪ್ರತ್ಯೇಕ ಶಿಕ್ಷಣದ ಏರ್ಪಾಡು ಬೇಕೆ ಬೇಕು. ಆ ಮಟ್ಟದಲ್ಲಿ ಸಹ ಶಿಕ್ಷಣದ ಸಂಪ್ರದಾಯವನ್ನು ಇಸ್ಲಾಂ ಒಪ್ಪುವುದೇ ಇಲ್ಲ. ಇಂದು ಮುಸ್ಲಿಂ ಸ್ತ್ರೀಯರು ಶಿಕ್ಷಣದ ಬಗ್ಗೆ ಅಲಕ್ಷ್ಯ ತೋರುತ್ತಿರುವುದಕ್ಕೆ ಇಸ್ಲಾಂನ ಬಗೆಗಿನ ಅವರ ಜ್ಞಾನದ ಕೊರತೆಯ ಜೊತೆಗೆ ಬಾಲಕಿಯರಿಗೆ ಪ್ರತ್ಯೇಕ ಶಿಕ್ಷಣದ ಏರ್ಪಾಟಿನ ಕೊರತೆಯೂ ಒಂದು ಪ್ರಮುಖ ಕಾರಣವಾಗಿದೆ.

ಸ್ತ್ರೀಯರನ್ನು ಅತ್ಯಂತ ಹೀನಾಯವಾಗಿ, ತುಚ್ಛವಾಗಿ, ಪಾಪದ ಪ್ರತೀಕವಾಗಿ, ಅಧರ್ಮ ಅನೀತಿಯ ಪ್ರೇರಕವಾಗಿ ಕಾಣುತ್ತಿದ್ದ ಬಗೆಗೆ ಇತಿಹಾಸದಲ್ಲಿ ಅನೇಕ ಆಧಾರಗಳಿವೆ. ಅನೇಕ ದೇಶಗಳಲ್ಲಂತೂ ತನಗೆ ಹೆಣ್ಣು ಮಗು ಹುಟ್ಟಿದ ಸುದ್ದಿ ತಿಳಿಯುತ್ತಲೇ ತಂದೆಯು ನಾಚಿಕೆಯಿಂದ ತಲೆ ತಗ್ಗಿಸುವ ಮತ್ತು ಅದನ್ನು ಜೀವಂತ ಹೂಳುವ ಮೂಲಕ ಅಥವಾ ಇನ್ನಾವುದೇ ವಿಧಾನದಿಂದ ಕೊಂದು ಹಾಕುವ ಮೂಲಕ ಆ ಅವಮಾನದಿಂದ ಪಾರಾಗುವ ಅಮಾನುಷ ರೂಡಿ ಸಾಮಾನ್ಯವಾಗಿತ್ತು. ನಿರಕ್ಷರಿ ಮತ್ತು ಅಜ್ಞಾನಿಗಳ ವಿಷಯವಂತಿರಲಿ, ಜ್ಞಾನಿಗಳೂ, ಧರ್ಮ ಧುರೀಣರೂ ಅನೇಕ ಶತಮಾನಗಳ ತನಕ ಸ್ತ್ರೀಯರನ್ನು ಮಾನವಳಾಗಿ ಕಾಣಬೇಕೆ, ಆಕೆಗೂ ಆತ್ಮ ಇದೆಯೇ ಎಂಬುದನ್ನು ಕೂಡ ನಿಖರವಾಗಿ ಹೇಳುವ ಸ್ಥಿತಿಯಲ್ಲಿಲ್ಲ.

ಆಧುನಿಕ ಯುಗದಲ್ಲಿ ಆಗಾಗ ಕೇಳಿಬರುತ್ತಿರುವ 'ಸ್ತ್ರೀ ಸ್ವಾತಂತ್ರ್ಯ', 'ಸ್ತ್ರೀ ಶಿಕ್ಷಣ', 'ಸ್ತ್ರೀ ಪುರುಷ ಸಮಾನತೆ' ಮತ್ತು 'ಸ್ತ್ರೀ ವಿಮೋಚನೆ'ಯ ಕೂಗು ಪ್ರವಾದಿ ಮಹ್ಮದ್ ೧೪ ಶತಮಾನಗಳ ಹಿಂದೆಯೇ ನೀಡಿದ ಕರೆಯ ಪ್ರತಿಧ್ವನಿಯಾಗಿದೆ. ಸ್ತ್ರೀಯೂ ಪುರುಷನಷ್ಟೇ ಮಾನವೀಯ ಅಂಶಗಳನ್ನು ಪಡೆದವಳೆಂಬುದನ್ನು ಅವರು ಜಗತ್ತಿಗೆ ಸಾರಿ ಹೇಳಿದರು.

ನನ್ನ ಅಧ್ಯಯನಕ್ಕೇ ಪೂರಕವಾಗಿ ಮುಸ್ಲಿಂ ಮಹಿಳೆಯರ ಶಿಕ್ಷಣದ ಬಗ್ಗೆ ಪರಾಮರ್ಶಿಸಿದಾಗ ಅವಲೋಕಿಸಿದಾಗ, ಇಂದು ಕಾಲ ಬದಲಾದಂತೆ ಮಹಿಳೆಯರ ಸ್ಥಿತಿ ಗತಿ, ಸ್ಥಾನಮಾನಗಳೂ, ಬದಲಾಗಿವೆ. ಇನ್ನೂ ಬಹಳ ಬದಲಾಗಬೇಕಿದೆ. ಇವತ್ತಿನ ಮುಸ್ಲಿಂ ಮಹಿಳೆ ಹಿಂದಿನಂತೆ ನಾಲ್ಕು ಗೋಡೆಗಳ ಮಧ್ಯೆ ಬಂಧಿತಳಾಗಬೇಕಿಲ್ಲ. ವಿದ್ಯಾವಂತಳಾಗಿ ಪುರುಷನಿಗೆ ಸರಿಸಮನಾಗಿ ಎಲ್ಲಾ ಕ್ಷೇತ್ರಗಳಲ್ಲಿಯೂ ದುಡಿಯುತ್ತಿದ್ದಾಳೆ. ಇಂದು ಹೆಣ್ಣು ಗಂಡಿನ ದಾಸಿಯಲ್ಲ. ಪತಿಯನ್ನು ದೇವರೆಂದು ಪೂಜಿಸಬೇಕಾಗಿಲ್ಲ.

ಸ್ತ್ರೀ ಪುರುಷರಲ್ಲಿ ಯಾರೂ ಹೆಚ್ಚಲ್ಲ, ಯಾರೂ ಕಡಿಮೆಯಲ್ಲ, ಅದಕ್ಕಾಗಿ ಪೈಪೋಟಿ ನಡೆಸುವುದೂ ಸರಿಯಲ್ಲ. ಯಾರು ಯಾರನ್ನು ಶೋಷಿಸದೆ, ಪರಸ್ಪರ ಪ್ರೀತಿ ವಿಶ್ವಾಸ, ಆತ್ಮೀಯತೆಯ ಹೊಂದಾಣಿಕೆಯಿಂದ, ಒಬ್ಬರನ್ನೊಬ್ಬರು ಗೌರವಿಸುತ್ತಾ, ಪ್ರೋತ್ಸಾಹಿಸುತ್ತಾ ದೋಷಗಳನ್ನು ಕಳೆದುಕೊಂಡು, ವ್ಯಕ್ತಿತ್ವ ಬೆಳೆಸಿಕೊಳ್ಳುವಲ್ಲಿ ಸಾರ್ಥಕತೆಯಿದೆ.

ಇಂದು ಬುದ್ಧಿ ಜ್ಞಾನ ಕೇವಲ ಪುರುಷನ ಸ್ವತ್ತಲ್ಲ. ಇದರ ಮುಷ್ಠಿಗೆ ಸಂಸ್ಕಾರಗಳಲ್ಲಿ ಹಲವಾರು ನಿದರ್ಶನಗಳು ಲಭ್ಯವಿದೆ. ಅದನ್ನರಿತು ಮಹಿಳೆ ಬುದ್ಧಿ ಜ್ಞಾನಗಳಿಂದ ತನ್ನ ಅಪೇಕ್ಷೆಗಳನ್ನು ಈಡೇರಿಸಿಕೊಳ್ಳುವುದಷ್ಟೇ ಅಲ್ಲ, ಸಮಾಜೋದ್ಧಾರದಲ್ಲಿ ತನ್ನ ಪಾಲನ್ನೂ ಅನುಭವಿಸಿ, ಆನಂದಿಸಿ, ಆಚರಿಸಿ ವಿಸ್ತರಿಸುವ ಅವಕಾಶಗಳು ಪುರುಷರಿಗಿಂತಲೂ ಇಂದು ಮಹಿಳೆಗೆ ಹೆಚ್ಚಿನ ಪ್ರಮಾಣದಲ್ಲಿ ಲಭ್ಯವಿದೆ.

ಕೇವಲ ಮುಸ್ಲಿಂ ಮಹಿಳೆಗೆ ಮಾತ್ರವಲ್ಲದೆ ಇಂದು ಪ್ರತಿ ಮಹಿಳೆಗೆ ಶಿಕ್ಷಣ ದೊರೆತಲ್ಲಿ ಅವಳು ಆತ್ಮವಿಶ್ವಾಸದಿಂದ ಬದುಕ ಬಲ್ಲಳು ಎನ್ನುವುದು ನನ್ನ ನಂಬಿಕೆ. ಅನಕ್ಷರಸ್ಥ ಮಹಿಳೆಯೂ ಸಂಕಷ್ಟ ಸನ್ನಿವೇಶಗಳಲ್ಲಿ ವಿಧವೆಯಾದಾಗಲೋ, ಗಂಡ ದೇಶಾಂತರ ಹೋದಾಗಲೋ ಮಕ್ಕಳನ್ನು ಬೆಳೆಸುವ ಜವಾಬ್ದಾರಿಯನ್ನು ಸಮರ್ಥವಾಗಿ ನಿರ್ವಹಿಸುತ್ತಲೇ ಬಂದಿದ್ದಾರೆ. ಆದಾಗ್ಯೂ ಸುತ್ತಲಿನ ಸಮಾಜದ ಬಗೆಗಿನ ಅಂಜಿಕೆಯನ್ನೂ ಮೆಟ್ಟಿ ನಿಲ್ಲಲು ಅಂಥ ಮಹಿಳೆಯರಿಗೆ ಸಾಧ್ಯವಾಗುವುದಿಲ್ಲ.

ಹಾಗಾಗಿ ಸುಶಿಕ್ಷಿತ ಮಹಿಳೆ ಹೆಚ್ಚು ಆತ್ಮವಿಶ್ವಾಸದಿಂದ ತನ್ನ ಬದುಕನ್ನು ರೂಪಿಸಿಕೊಳ್ಳಬಲ್ಲಳು. ಅನಕ್ಷರಸ್ಥ ಮಹಿಳೆಯರಿಗಿಂತ ಅಕ್ಷರಸ್ಥ ಮಹಿಳೆಯನ್ನು ಹೆಚ್ಚು ಸಮ್ಮಾನದಿಂದ ಕಾಣುವ ಪರಿಸರ ಈಗ ನಿರ್ಮಾಣವಾಗಿದೆ. ಬದುಕಿನಲ್ಲಿ ಅವಘಡ ಸಂಭವಿಸಿದಾಗಲೂ, ವಿದ್ಯಾವಂತಳಿಗೆ ಅದನ್ನು ಎದುರಿಸಿ ನಿಲ್ಲುವ, ಬದುಕನ್ನೂ ಪುನಾರೂಪಿಸಿಕೊಳ್ಳುವ, ಸಾಮರ್ಥ್ಯವನ್ನೂ ಅವಳ ಓದಿನ ಜ್ಞಾನ ಹೆಚ್ಚಿಸುತ್ತದೆ ನಿಜ.

ಮುಸ್ಲಿಂ ಸಮುದಾಯದ ಪ್ರತಿಯೊಬ್ಬ ಶಿಕ್ಷಿತನಾಗಬೇಕು ಮಹಿಳೆಯ ಎರಡನೇಯ ದರ್ಜೆಯ ನೋಟ ಮುಸ್ಲಿಂ ಸಮುದಾಯದಿಂದ ಮಾಯವಾಗಬೇಕು. ಒಬ್ಬ ಸ್ತ್ರೀ ಶಿಕ್ಷಿತಳಾದರೆ ಒಂದು ಸಮುದಾಯ ಶಿಕ್ಷಿತವಾದಂತೆ ಎಂಬ ಮಾತಿನ ಮಹತ್ವವನ್ನು ಮುಸ್ಲಿಂ ಸಮಾಜ ಕೂಡಲೇ ಅರಿಯಬೇಕಾದ ಅನಿವಾರ್ಯತೆ ಇದೆ.

ಕಳೆದ ಅವಿದ್ಯೆಯ ದಿನಗಳನ್ನು ಮರೆತು ಬರುವ ನಾಳೆಗಳಿಗಾಗಿ ಶಿಕ್ಷಣದಿಂದಾಗಿ ಬದುಕು ಎಂಬ ಧ್ಯೇಯ ನಮ್ಮದಾಗಬೇಕು. ನಾಡಿನ ಮುಸ್ಲಿಂ ಶಿಕ್ಷಿತರಾದರೆ, ಸರ್ಕಾರಿ ಮತ್ತು ಖಾಸಗಿ ರಂಗಗಳಲ್ಲಿ ದುಡಿಯುವುದು ಸಾಧ್ಯವಾಗುತ್ತದೆ. ಆ ದುಡಿಮೆಯಿಂದಾಗಿ ಅವರು ಪ್ರಬುದ್ಧರಾಗುತ್ತಾರೆ, ಎಚ್ಚರಗೊಳ್ಳುತ್ತಾರೆ. ಮುಸ್ಲಿಂರಿಗೆ ಇತರರ ಕರುಣೆ, ಸಹಾನುಭೂತಿ ಬೇಕಾಗಿಲ್ಲ ಅವರಿಗೆ ಬೇಕಾಗಿರುವುದು ವಸ್ತುನಿಷ್ಠವಾದ ಪ್ರಾಮಾಣಿಕ ಶಿಕ್ಷಣವನ್ನು ಪಡೆಯುವ ಅವಕಾಶಗಳು. ಅವಕಾಶಗಳನ್ನು ಸದುಪಯೋಗಪಡಿಸಿಕೊಳ್ಳಲು ಸ್ವಾರ್ಥರಹಿತವಾದ ಮಾರ್ಗದರ್ಶನ, ಮುಂದಿನ ದಿನಗಳಲ್ಲಿ, ಇಂದಿನ ದಿನಗಳಲ್ಲಿ ಇವುಗಳು ದೊರಕುವಂತಾಗಬೇಕು. ಆಗ ಮಾತ್ರ ಮುಸ್ಲಿಂರು ಪ್ರೀತಿಯಿಂದ, ಸೌಜನ್ಯದಿಂದ, ನೆಮ್ಮದಿಯಿಂದ ಬದುಕಲು ಸಾಧ್ಯವಾಗಬಹುದು.[೯]

ಇದಕ್ಕೆಲ್ಲಾ ಪೂರಕವಾಗಿ ಭಾರತೀಯ ಮುಸ್ಲಿಂ ಮಹಿಳೆ ಅನೇಕ ಸಮಸ್ಯೆಗಳ ಮಧ್ಯೆಯೂ ಗಮನಾರ್ಹ ಪ್ರಗತಿಯನ್ನೂ ಸಾಧಿಸಿದ್ದಾಳೆ. ಗುರುತರವಾದ ಶಕ್ತಿಕೇಂದ್ರಗಳನ್ನು ಪಡಿಸಿಕೊಂಡಿದ್ದಾಳೆ. ಶಮೀಮ ಬಾನು ಡಿ.ಸಿ.ಯಾಗಿ, ಫಾತೀಮಾ ಬೀಬಿ, ಸುಪ್ರೀಂ ಕೋರ್ಟ್ ನ್ಯಾಯಧೀಶೆಯಾಗಿ, ರಾಜ್ಯಪಾಲೆಯಾಗಿ, ಇತ್ತೀಚೆಗೆ ಸ್ಥಾಪಿತ ಬಿಜಾಪುರದ ಮಹಿಳಾ ವಿಶ್ವವಿದ್ಯಾಲಯಕ್ಕೆ ಉಪಕುಲಪತಿಯಾಗಿ ಅಖ್ತರ್ ಬೇಗಂರವರು ೨೦೦೧ ರಲ್ಲಿ ನಡೆದ ಐ.ಎ.ಎಸ್. ಪರೀಕ್ಷೆಯಲ್ಲಿ ೨ನೇ ರ್‍ಯಾಂಕ್ ಪಡೆದ ಶಹ್ಲಾ ನಿಗಾರ್ ರಂತಹ ಹೊಸ ಹೊಸ ಸಾಧನೆಗಳು ಮಾದರಿಗಳು ನಮ್ಮ ಮುಂದೆ ಇವೆ.[೧೦]

## ೨.೫. ಮುಸ್ಲಿಂ ಮಹಿಳೆಯ ಸ್ಥಾನಮಾನಗಳು

ಭಾರತದಲ್ಲಿ ಸ್ತ್ರೀಯ ಸ್ಥಾನ ಮಾನ ತುಂಬ ವಿರೋಧಾಭಾಸದಿಂದ ಕೂಡಿದೆ. ವೇದಗಳ ಕಾಲದಲ್ಲಿ ದೇವತೆಯೆಂದು ಪೂಜಿಸಲ್ಪಟ್ಟ ಹೆಣ್ಣು ಮುಂದೆ ಶೂದ್ರಳೆಂದು ಪರಿಗಣಿಸಲ್ಪಟ್ಟಳು. ಬಾಲ್ಯವಿವಾಹ, ಸತಿ ಪದ್ಧತಿ, ಬಹುಪತ್ನಿತ್ವ, ಹಾಗೂ ಪರಕೀಯರ ದಾಳಿಯಿಂದಾಗಿ ಅವಳ ಜೀವನದಲ್ಲಿ ಅಂಧಕಾರದ ಯುಗ ಪ್ರಾರಂಭವಾಯಿತು. ಹೀಗೇಕಾಯಿತು? ಇದಕ್ಕೆ ಕಾರಣರಾರು? ಎಂಬುದಕ್ಕೆ ಹಿನ್ನಲೆಯಾಗಿ ಸಾವಿರಾರು ವರ್ಷಗಳ ದೀರ್ಘ ಇತಿಹಾಸವೇ ಇದೆ.

ವೇದಗಳ ಕಾಲದಲ್ಲಿ ಮಹಿಳೆಗೆ ಪುರುಷರಷ್ಟೇ ಸರಿಸಮಾನ ಅಧಿಕಾರವಿತ್ತು. ಪುರುಷರಂತೆಯೇ ಸ್ತ್ರೀಯರೂ ೧೩ ವರ್ಷ ಬ್ರಹ್ಮಚರ್ಯದ ಕಠಿಣ ವ್ರತಬದ್ಧರಾಗಿ ವಿದ್ಯಾಭ್ಯಾಸ ಮಾಡಿ, ಪ್ರೌಢ ವಯಸ್ಸಿಗೆ ಬಂದ ಮೇಲೆ ಸ್ವಯಂವರ ಪದ್ಧತಿಯ ಪ್ರಕಾರ, ತಮಗೆ ಇಷ್ಟ ಬಂದವರನ್ನು ವರಿಸುತ್ತಿದ್ದರು. ಅದಕ್ಕೆ ಹಿರಿಯರು ಒಪ್ಪಿ ಆಶೀರ್ವಾದಸುತ್ತಿದ್ದರು. ಆ ಕಾಲದ ವಿಧವೆ ತಾನು ಬಯಸಿದರೆ, ಮರು ಮದುವೆಯಾಗಬಹುದಿತ್ತು. ಇದಕ್ಕೆ ಸಾಕ್ಷಿಯಾಗಿ ವೇದಗಳಲ್ಲಿ ಅನೇಕ ಪ್ರಸಂಗಗಳು ದೊರೆಯುತ್ತವೆ. ಅಂದು ಮಕ್ಕಳಿಲ್ಲದೆ, ವಿಧವೆಯರಾದ ಸ್ತ್ರೀಯರು ಇಷ್ಟಪಟ್ಟರೆ, ನಿಯೋಗ ಕ್ರಮದಿಂದ ಮಕ್ಕಳನ್ನು ಪಡೆಯಬಹುದಿತ್ತು. ಇದಕ್ಕೆ ಮಹಾಭಾರತದ ಧೃತರಾಷ್ಟ್ರ, ಪಾಂಡುರಾಜರ ಜನನದ ಹಿನ್ನಲೆಯನ್ನರಿಯಬಹುದು.[೧೧]

ಆದರೆ ನನ್ನ ಅಧ್ಯಯನದ ದೃಷ್ಟಿಯಿಂದ ಮುಸ್ಲಿಂ ಮಹಿಳೆಯರ ಸ್ಥಾನಮಾನಗಳ ಬಗ್ಗೆ ಹೇಳುವುದಾದರೆ, ಭಾರತದಲ್ಲಿ ಹಿಂದೂ ಸಮಾಜಕ್ಕಿಂತ ಮುಸ್ಲಿಂ ಸಮಾಜ ಬಹಳ ಸಂಕೀರ್ಣವಾಗಿ ಬದುಕುತ್ತಿದೆ. ಇಲ್ಲಿಯ ಧಾರ್ಮಿಕ ಹಿಡಿತಗಳು, ಶೋಷಣೆಗಳು ನಿಲುಕದೇ ಹೋದ ಸೌಲಭ್ಯಗಳು, ಸಮಾನತೆಯಿಲ್ಲದ ಸ್ತ್ರೀಯರು, ಅಸಹಾಯಕ ಪುರುಷರ ಮತ್ತು ಮೂಲ ಆಚರಣೆಗಳ ಮುಸ್ಲಿಂ ಮಹಿಳೆಯರ ಬದುಕನ್ನು ಬರ್ಬರಗೊಳಿಸಿದ ಆತಂಕಗಳಿವೆ.

ಆರ್ಥಿಕ, ಸಾಮಾಜಿಕ ಹಿಂದುಳಿಯುವಿಕೆಯಿಂದ ಅಂಟಿಕೊಂಡಿರುವ ಅಜ್ಞಾನ, ಮೂಢನಂಬಿಕೆ, ಬಡತನಗಳು ಈ ಸಮಾಜಕ್ಕಂಟಿದ ಶಾಪಗಳಾಗಿವೆ. ಶಿಕ್ಷಣವಿಲ್ಲದೆ ಜ್ಞಾನದ ಬಾಗಿಲು ಇವರಿಗೆ ಮುಚ್ಚಿಕೊಂಡಂತೆ ಸರಿ. ವಿಚಿತ್ರವಾದ ಅಭದ್ರತೆ, ಅನಿಶ್ಚಿತೆಯಡಿ ಈ ಸಮಾಜ ನರುಳುತ್ತಿದೆ. ಧರ್ಮಗ್ರಂಥಗಳನ್ನು ಅರ್ಥೈಸಿಕೊಳ್ಳುವ ಪುರೋಹಿತಶಾಹಿ, ಸ್ವಾರ್ಥಪರ ರಾಜಕಾರಣ, ಲಿಂಗಭೇದ, ವರ್ಗಭೇದ ಸ್ತ್ರೀಯರನ್ನು ಉಸಿರುಕಟ್ಟುವ ವಾತವರಣದಲ್ಲಿ ಕೌಟುಂಬಿಕ ಚೌಕಟ್ಟುಗಳು, ಒಂದೆಡೆಯಾದರೆ, ಮತ್ತೊಂದು ಕಡೆ ಬಹುಪತ್ನಿತ್ವ, ತಲ್ಲಾಖ್, ವಿಚ್ಛೇಧನದ ಏಕಪಕ್ಷೀಯ ತೀರ್ಮಾನಗಳು ಮಹಿಳಾ ಲೋಕವನ್ನು ತಲ್ಲಣಗೊಳಿಸಿವೆ.[೧೨]

ಎಲ್ಲಾ ಸಮಾಜಗಳಲ್ಲಿಯೂ ೩ ನೇ ದರ್ಜೆಯ ಪ್ರಜೆಯಾದ ಹೆಣ್ಣನ್ನು ಈ ಧರ್ಮವೂ ಭಿನ್ನವಾಗಿ ಕಂಡಿಲ್ಲ. ಇಲ್ಲಿಯೂ ದ್ವಿನೀತಿಯ ಧೋರಣೆಗಳಿವೆ. ಎಷ್ಟೋ ಸಲ ಪ್ರಜನನ ಕ್ರಿಯೆಯಿಂದ ಜೀವ ಪರಳಾಗುವ ಹೆಣ್ಣನ್ನು ಸಹಿಸಿಕೊಳ್ಳದ ಪುರುಷನ ಜೀವ ವಿರೋಧಿ ನೆಲೆಗಳು ದಾಖಲಾಗಿವೆ. ಅವನ ಕೊರತೆಗಳೇ ಎಷ್ಟೋ ಸಲ ಅವನಿಗೆ ವರದಾನವಾಗುತ್ತವೆ.[೧೩]

ಹೆಣ್ಣಿನ ಬಾಳು ದಯನೀಯವಾಗಿದೆ. ಗಂಡುಗೂಳಿ ಸಮಾಜ ಅವಳನ್ನು ಬಹಳಷ್ಟು ಕ್ರೂರವಾಗಿ ನಡೆಸಿಕೊಂಡಿದೆ, ಒಂದು ಹೆಣ್ಣು ಗಂಡು ಮಾತಾಡಿದರೂ ಸಹ ಅದು ಮತೀಯ ಸಂಘರ್ಷಕ್ಕೇ ಕಾರಣವಾಗುವ ಸಂಗತಿಗಳಿವೆ. ಇಸ್ಲಾಂ ಮೌನವಾಗಿಯೇ ಎಲ್ಲಾ ಸಾಮಾಜಿಕ ಬದಲಾವಣೆಗಳನ್ನು ಸ್ವೀಕರಿಸಿದೆಯಾದರೂ ಒಣ ವಾದ ಮಂಡಿಸುವ ಪಂಡಿತರುಗಳು ಅದನ್ನು ಒಪ್ಪಿಕೊಳ್ಳಲಿಕ್ಕಿಲ್ಲ.

ಮಹಿಳೆಯರ ಕುರಿತು ಚಿಂತಿಸುವಾಗ ನಾವು ಮುಸ್ಲಿಂ ಮಹಿಳೆಯರ ಸ್ಥಾನಮಾನಗಳ ಬಗ್ಗೆ ವಿಶೇಷ ಗಮನ ಕೊಡುವುದು ಅವಶ್ಯಕವಾಗಿದೆ. ಏಕೆಂದರೆ ಅಸಮಾನತೆಯೊಂದೆ ಅವಳ ಬದುಕಿನಲ್ಲಿ ಸಮಾನವಾಗಿರುವ ಅಂಶವಾಗಿದೆ. ಜಗತ್ತಿನಲ್ಲಿ ಒಂದು ಶತಕೋಟಿಗೂ ಹೆಚ್ಚು ಮಹಿಳೆಯರಿದ್ದಾರೆ. ಅದರಲ್ಲಿ ಅರ್ಧಕೋಟಿಯಷ್ಟು ಮುಸ್ಲಿಂ ಮಹಿಳೆಯರಿದ್ದಾರೆ.[೧೪]

ಪೈಗಂಬರ್‌ರವರ ಕಾಲಕ್ಕೆ ಹಣ್ಣು ಮಗುವನ್ನು ಜೀವಂತ ಹುಗಿಯುತ್ತಿದ್ದರು. ಆದರೆ ಪೈಗಂಬರ್‌ರು ಅದನ್ನು ತಪ್ಪಿಸಿದರು. ಇಂದಿಗೂ ಮುಸ್ಲಿಂ ಮಹಿಳೆಯರ ಮೇಲೆ ಕುಟುಂಬದ ಚೌಕಟ್ಟಿನ ಒಳ ಹೊರಗೂ ಶೋಷಣೆ ನಡೆಯುತ್ತಲೇ ಇದೆ. ಅದಕ್ಕಾಗಿ ಪ್ರಭುತ್ವವು ವರ್ಗ ಶೋಷಣೆಯ ಸಾಧನವಾದರೆ ಕುಟುಂಬವು ಸ್ತ್ರೀಯನ್ನು ಶೋಷಿಸಲು ಪುರುಷರ ಸಾಧನವಾಯಿತು. ಜಗತ್ತಿನ ಅನಕ್ಷರಸ್ಥರಲ್ಲಿ ಬಹುದೊಡ್ಡ ಪಾಲು ಅನಕ್ಷರಸ್ಥರು ಮುಸ್ಲಿಂ ಮಹಿಳೆಯರೇ ಆಗಿದ್ದಾರೆ ಎಂದು ಕ್ಷೇತ್ರಕಾರ್ಯದಲ್ಲಿ ತಿಳಿಯಲಾಗಿದೆ.

**೨.೫.೧. ಪ್ರಸ್ತುತ ಮುಸ್ಲಿಂ ಮಹಿಳೆಯ ಸ್ಥಿತಿಗತಿ**

ಸಂಪ್ರದಾಯವಾದಿ ಮುಸ್ಲಿಂ ರಾಷ್ಟ್ರಗಳಿಗೆ ಹೋಲಿಸಿದರೆ, ಭಾರತೀಯ ಮುಸ್ಲಿಂ ಮಹಿಳೆಯರ ಸ್ಥಿತಿಯು ಅಷ್ಟೇನು ಭಿನ್ನವಿಲ್ಲದಿದ್ದರೂ ಸ್ವಲ್ಪ ಸಮಧಾನ ಪಡುವ ರೀತಿಯಲ್ಲಿಯಾದುದು ಇದೆ. ಯಾಕೆಂದರೆ ಹಲವಾರು ಮುಸ್ಲಿಂ ರಾಷ್ಟ್ರಗಳಲ್ಲಿ ಮುಸ್ಲಿಂ ಮಹಿಳೆಯ ಸ್ಥಿತಿಯು ಅತ್ಯಂತ ಶೋಚನೀಯ ಸ್ಥಿತಿಯಲ್ಲಿರುವುದನ್ನು ನಾವು ಕಾಣಬಹುದು. ಅವಳಿಗೆ ಯಾವುದೇ ರೀತಿಯ ಸ್ವಾತಂತ್ರ್ಯವನ್ನು ಕೊಡಲು ಇಂತಹ ರಾಷ್ಟ್ರಗಳು ಸಕಾರಾತ್ಮಕ ಧೋರಣೆಯನ್ನು ಹೊಂದಿಲ್ಲ. ಮುಸ್ಲಿಂ ಮಹಿಳೆಯರ ಸ್ಥಾನಮಾನ ಸಾಪೇಕ್ಷ ವಿಷಯ ಎನಿಸುತ್ತದೆ. ಅದರಲ್ಲಿಯು ವಿಶೇಷವಾಗಿ ಭಾರತೀಯ ಮುಸ್ಲಿಂ ಮಹಿಳೆಯರು.

ಸ್ಥಾನಮಾನ ಹಲವು ಹೋಲಿಕೆಗಳೊಂದಿಗೆ ನಾವು ಇದನ್ನು ಅರಿಯಬಹುದು. ಇತರ ಮುಸ್ಲಿಂ ರಾಷ್ಟ್ರಗಳಲ್ಲಿರುವ ಮುಸ್ಲಿಂ ಮಹಿಳೆಯ ಸ್ಥಿತಿಗತಿಯನ್ನು ಭಾರತೀಯ ಮಹಿಳೆಗೆ ಅನ್ವಯವಾಗುವಂತೆ ಇದೆ. ಭಾರತದ ಮುಸ್ಲಿಂ ಮಹಿಳೆಯನ್ನು ಹಿಂದೂ ಸ್ತ್ರೀಗೆ ಹೋಲಿಸಿ ನಾವು ಅಧ್ಯಯನ ಮಾಡಬಹುದು. ಅಂದರೆ ಇಂತಹ ಹೋಲಿಕೆಯ ಅಧ್ಯಯನವು ಸಹ ಸಾಪೇಕ್ಷ ಎನಿಸಿಬಿಡುತ್ತದೆ. ಏಕೆಂದರೆ, ಅತಿ ಹಿಂದಿನ ಒಂದು ಸ್ಥಿತಿಗೆ ಹೋಲಿಕೆ ಮಾಡಿದಾಗ ಈಗಿನ ಸ್ಥಿತಿ ಸ್ವಲ್ಪ ಸುಧಾರಣೆಯ ಹಂತದಲ್ಲಿದೆ ಎನ್ನಬಹುದು.

''ಇಂದಿನ ಅವಳ ಸ್ಥಿತಿಗತಿ ಉತ್ತಮ ಎನಿಸಲು ಕೆಲವು ಕಲ್ಪಿತ ಸಮಧಾನ ತರುವಂತಹ ವಿಷಯಗಳನ್ನು ನಾವು ಊಹಿಸಬಹುದು. ಇತರ ರಾಷ್ಟ್ರಗಳ ಮುಸ್ಲಿಂ ಮಹಿಳೆಗೆ ಹೋಲಿಸಿದರೆ, ಭಾರತೀಯ ಮುಸ್ಲಿಂ ಮಹಿಳೆಯು ಕಾಲ ಕಾಲಕ್ಕೆ ಬದಲಾವಣೆಗೆ ಒಳಗಾಗಿರುವುದರಿಂದ ಇದು ಸ್ವಲ್ಪ ಅಸ್ಪಷ್ಟ ಎನಿಸಬಹುದು. ಅಂತೆಯೇ ಅವಳ

ಸ್ಥಾನಮಾನದ ಬಗ್ಗೆ ಇಂದಿನ ಸಮಾಜದ ನಿರೀಕ್ಷೆಯ ಹಿನ್ನಲೆಯಲ್ಲಿಯೇ ನಾವು ಇದನ್ನು ಅರಿಯುವುದು ಸೂಕ್ತವಾಗಿದೆ. ಮುಸ್ಲಿಂ ಮಹಿಳೆಯ ಸ್ಥಾನಮಾನವನ್ನು ವಿಶ್ಲೇಷಿಸಿದಾಗ ಅವಳ ವ್ಯಕ್ತಿತ್ವದ ವಿಕಾಸಕ್ಕೆ ಅನುಕೂಲಕರವಾದಂತಹ ಪರಿಸ್ಥಿತಿ ಇದೆಯೇ ಅಥವಾ ಇದರ ಹಿನ್ನೆಲೆಯಲ್ಲಿ ಕಂಡು ಬರುವಂತಹ ಸಾಮಾಜಿಕ ಅಡೆತಡೆಗಳು ಏನು ಎಂಬುದು ಅರಿಯುವುದು ಸೂಕ್ತವಾಗಿದೆ. ಅದೇ ರೀತಿ ಪುರುಷರ ಹಕ್ಕು ಸೌಲತ್ತುಗಳಿಗೆ ಹೋಲಿಸಿದರೆ, ಮುಸ್ಲಿಂ ಮಹಿಳೆ ಸ್ಥಿತಿ ಯಾವ ಸ್ವರೂಪದಲ್ಲಿದೆ ಎಂಬುದನ್ನು ಅರಿಯುವುದು ಸಹ ಇಲ್ಲಿ ಅವಶ್ಯಕವಾಗಿದೆ. ಭಾರತದಲ್ಲಿ ಮೊದಲು ಹಿಂದೂ ಕೋಡ್‌ನ್ನು ಜಾರಿಗೆ ತರುವ ಮುಂಚೆ ಮುಸ್ಲಿಂ ಮಹಿಳೆಯರು ಮುಸ್ಲಿಂ ಕಾಯಿದೆಯ ಅಡಿಯಲ್ಲಿ ಕೆಲವು ವೈಯಕ್ತಿಕ ಹಕ್ಕುಗಳನ್ನು ಅನುಭವಿಸುತ್ತಿದ್ದರು. ಆದರೆ ಇಂತಹ ಹಕ್ಕುಗಳು ಹಿಂದೂ ಮಹಿಳೆಯರಿಗೆ ಲಭ್ಯವಿರಲಿಲ್ಲ.''[೧೫]

ವಿಧವೆಯರ ಮರುವಿವಾಹ, ಪೋಷಕರ ಆಸ್ತಿಯಲ್ಲಿ ಪಾಲು ಇತ್ಯಾದಿ ವಿಷಯಗಳಿಗೆ ಸಂಬಂಧಿಸಿದಂತೆ ಮುಸ್ಲಿಂ ಮಹಿಳೆಯರು ಕೆಲವು ಸೌಲಭ್ಯಗಳನ್ನು ಹೊಂದಿದ್ದರು. ಮಹಿಳೆಯನ್ನು ಚಿರಾಸ್ತಿ ಎಂದು ಪರಿಭಾವಿಸಿಕೊಂಡಿದ್ದ ಪ್ರಾರಂಭದ ದಿನಗಳಲ್ಲಿಯೇ ಅವಳಿಗೆ ಇಸ್ಲಾಂ ಈ ರೀತಿಯ ಹಕ್ಕುಗಳನ್ನು ನೀಡಿತ್ತು. ಆದರೆ ನಾವು ಈ ಒಂದು ಉದಾರವಾದ ನಿಲುವಿಗೆ ಇಸ್ಲಾಂ ಅನ್ನು ಸ್ವಲ್ಪ ಹೊಗಳಲೇಬೇಕು.

ಇಲ್ಲಿ ನಾವು ಮುಖ್ಯವಾಗಿ ಗಮನಿಸಬೇಕಿರುವುದೇನೆಂದರೆ, ಪರಂಪರಾಗತವಾಗಿ ನಡೆದುಕೊಂಡು ಬಂದಿರುವಂತಹ ಬಲವಂತದ ತಾಯ್ತನ, ಪತ್ನಿಯ ಸೀಮಿತ ಪಾತ್ರ, ಇವುಗಳ ಹಿನ್ನಲೆಯಲ್ಲಿ ಅವಳ ವ್ಯಕ್ತಿ ಸ್ವಾತಂತ್ರ್ಯಕ್ಕೆ ಸಂಬಂಧಿಸಿದಂತೆ ಕಂಡು ಬರುವ ತೀರಾ ಸಂಕುಚಿತ ದೃಷ್ಠಿಕೋನದ ಹಿನ್ನಲೆಯಲ್ಲಿ ಮುಸ್ಲಿಂ ಮಹಿಳೆಯ ಸ್ಥಾನಮಾನಗಳನ್ನು ವಿಶ್ಲೇಷಿಸಬೇಕಾಗುತ್ತದೆ. ಮುಸ್ಲಿಂ ಮಹಿಳೆಯ ಸ್ಥಾನಮಾನವನ್ನು ಅಳೆಯುವಲ್ಲಿ ಕಾನೂನಿನ ಮೂಲಕ ಎಷ್ಟು ಸೌಲಭ್ಯಗಳನ್ನು ಅವಳಿಗೆ ಒದಗಿಸಲಾಗಿದೆ ಎಂಬಷ್ಟೇ ಅಧ್ಯಯನಕ್ಕೆ ಪರಿಪೂರ್ಣವಾದ ಚಿತ್ರಣವನ್ನು ಕೊಡಲಾರದು. ಕಾನೂನಿನ ಸವಲತ್ತುಗಳಿಗೂ ಮತ್ತು ನಮ್ಮ ಸಮಾಜದಲ್ಲಿ ಪ್ರಚಲಿತವಿರುವ ಧೋರಣೆಗೂ ಅಂತರವಿರಬಹುದು. ಇವು ಒಂದಕ್ಕೊಂದು ಹೊಂದಿಕೊಂಡೂ ಇರಬಹುದು. ಅಂತೆಯೇ ಮುಸ್ಲಿಂ ಮಹಿಳೆಯ ಸ್ಥಾನಮಾನವನ್ನು ಗುರ್ತಿಸಲು ಕಾನೂನು ಮತ್ತು ಸಮಾಜದಲ್ಲಿನ ಧೋರಣೆ ಇವರೆಡನ್ನು ಜೊತೆ ಜೊತೆಗೆ ಗುರ್ತಿಸಬೇಕಾಗುವುದು. ಈ ಅಂಶಗಳಿಂದ ನಾವು ಪ್ರಸ್ತುತ ಮುಸ್ಲಿಂ ಮಹಿಳೆಯ ಎದುರಿಸುತ್ತಿರುವಂತಹ ಕೆಲವು ಸಮಸ್ಯೆಗಳನ್ನು ಅರಿಯೋಣ,

**೨.೫.೨. ಮುಸ್ಲಿಂ ಮಹಿಳೆಯ ಗೃಹ ಬಂಧನ**

ಮನೆಯೆ ಭಾರತೀಯ ಮುಸ್ಲಿಂ ಮಹಿಳೆಯ ಮೂಲ ಕಾರ್ಯಕ್ಷೇತ್ರ ಎಂದು ಗುರುತಿಸಲಾಗಿದೆ. ಅವಳು ಕೇವಲ ಮನೆಯೊಳಗೆ ಬಂಧಿಯಾಗಿರುವುದರಿಂದ ಹೊರಗಿನ ಗುರುತರವಾದಂತಹ ಯಾವುದೇ ಶಕ್ತಿಕೇಂದ್ರಗಳಿಂದ ದೂರ ಉಳಿದಿದ್ದಾಳೆ, ಧಾರ್ಮಿಕ ನಿರ್ಬಂಧಗಳು, ಉಸಿರುಕಟ್ಟುವಂತಹ ವಾತಾವರಣದಲ್ಲಿ ಮುಸ್ಲಿಂ ಮಹಿಳೆಯು ರೋಸಿ ಹೋಗಿದ್ದಾಳೆ.

ಸಮಾಜದಲ್ಲಿ ಗೌರವಯುತವಾದಂತಹ ಜೀವನದ ಅರಿವೂ ಅವಳಿಗಿಲ್ಲದೆ ವಿರುದ್ಧವಾದಂತಹ ದಿಕ್ಕಿನಲ್ಲಿ ನಡೆಯುತ್ತಿದೆ. ಜೀವನದ ಪ್ರತಿಯೊಂದು ರಂಗಗಳ ಅಧಿಕಾರ ಎಲ್ಲವೂ ಪುರುಷರ ಪರವಾಗಿರುವುದುರಿಂದ ಅವನ ಇರುವಿಕೆಯು ಇಲ್ಲದ ಸ್ಥಳವೆಂದರೆ, ಮನೆಯೆ ಕಾರ್ಯಗಳಾಗಿರುವುದರಿಂದ ಅವಳು ಅದನ್ನೆ ತನ್ನ ಅಂತಿಮ ಕ್ಷೇತ್ರ ಎಂದು ಪಡೆದುಕೊಂಡಿದ್ದಾಳೆ. ಅಲ್ಲದೆ ಅವಳಿಗೆ ಮನೆಯೆ ಅತ್ಯಂತ ಸರ್ವೋನ್ನತ ಮಸೀದ್ ಎಂಬ ಪರಿಕಲ್ಪನೆಯು ಸಹ ಇಸ್ಲಾಂನಲ್ಲಿ ಹಾಸುಹೊಕ್ಕಾಗಿದೆ. ಇಸ್ಲಾಂ ಸಮಾಜದಲ್ಲಿ ಮುಸ್ಲಿಂ ಮಹಿಳೆಯ ಪಾತ್ರವೇನು? ಅವಳ ಚಟುವಟಿಕೆಗಳ ರೂಪರೇಶೆಗಳು ಏನು? ಸ್ವರೂಪಗಳು ಏನು? ಎನ್ನುವುದರ ಕುರಿತು ಖುರಾನ್‌ನಲ್ಲಿ ಪ್ರವಾದಿಗಳೇ ಉಪದೇಶಿಸಿದ್ದಾರೆ. ನಿಮ್ಮ ಮನೆಗಳಲ್ಲಿಯೇ ಕುಳಿತಿರಿ, ಹಿಂದಿನ ಅಜ್ಞಾನ ಕಾಲದಂತೆ ನಿಮ್ಮ ಸೌಂದರ್ಯ ಅಲಂಕಾರಗಳನ್ನು ಪ್ರದರ್ಶಿಸುತ್ತ ತಿರುಗಾಡಬೇಡಿರಿ'' (ಖುರಾನ್ ೩೩, ೩೨) ಈ ಕಾರಣಗಳಿಂದಲೇ ಸ್ತ್ರೀಯ ಚಟುವಟಿಕೆಯ ದಿಕ್ಕನ್ನು, ಮನೆಯ ಕಡೆಗೆ ತಿರುಗಿಸಲಾಗಿದೆ. ಅವಳು ವ್ಯಾಪಾರಿ, ಗುಮಾಸ್ತೆ, ಅಧಿಕಾರಿಣಿ, ನ್ಯಾಯಧೀಶೆ, ರಾಜಕಾರಣಿ ಎಂಬ ಬಿರುದುಗಳಿಂದ ದೂರವೇ ಉಳಿದುಕೊಂಡಿದ್ದಾಳೆ. ಇವುಗಳಿಗೂ ತನಗೂ ಸಂಬಂಧವೇ ಇಲ್ಲ ಅರಿವು ಅವಳಲ್ಲಿ ಆಳವಾಗಿ ಬೇರೂರಿಕೊಂಡಿದೆ. ಅವಳ ಈ ಮಾನಸಿಕ ತುಡಿತಕ್ಕೆ ಮುಖ್ಯ ಕಾರಣ ಎಂದರೆ ಪಾರಂಪರಿಕವಾಗಿ ಹರಿದುಕೊಂಡು ಬಂದಿರುವಂತಹ ಮೂಲಭೂತವಾದಿತನದ ಕಠೋರ ನಿಲುವುಗಳು, ಚಿಕ್ಕಂದಿನಿಂದಲೇ ಅವಳಿಗೆ ತನ್ನ ಮುಂದಿನ ಕಾರ್ಯಗಳ ಅರಿವನ್ನು ಯಥಾವತ್ತಾಗಿ ಮನೆಯ ಔಪಚಾರಿಕ ವಾತವರಣದಲ್ಲಿ ನೀಡಲಾಗುತ್ತದೆ. ಹೀಗೆ ಬಾಲ್ಯದಿಂದಲೇ ಯಥವತ್ತಾಗಿ ಪಾಲಿತವಾಗಿ ಬರುವಂತಹ ಕೆಲವು ಸಾಪ್ರಂದಾಯಿಕ ಕೊಡುಗೆಗಳು ಅವಳ ಜೀವಮಾನದ ಕೊನೆಯವರೆಗೂ ಹಾಗೆ ಅವಳ ಮುಂದಿನ ತನ್ನ ಮಗಳಿಗೂ ವರ್ಗಾವಣೆಯಾಗುತ್ತಲೇ ಸಾಗುತ್ತವೆ.

ಮುಸ್ಲಿಂ ಮಹಿಳೆಯ ಕಾರ್ಯಕ್ಷೇತ್ರ ಮನೆ ಎಂಬ ಪರಿಕಲ್ಪನೆಯ ಬೇರುಗಳು ಎಲ್ಲ ಸಾಂಪ್ರದಾಯಿಕ ಸಮುದಾಯಗಳಲ್ಲಿ ಹಾಸುಹೊಕ್ಕಾಗಿದೆ. ಇಂತಹ ಅವೈಚಾರಿಕ ನಿಲುವುಗಳು ಸ್ತ್ರೀಯ ಸ್ವಾತಂತ್ರ್ಯಕ್ಕೆ ತಡೆಯನ್ನು ಒಡ್ಡುತ್ತವೆ. ಅವಳ ವ್ಯಕ್ತಿತ್ವದ ಬೆಳವಣಿಗೆಗೆ ಚ್ಯುತಿ ತರುವಂತಹ ರೀತಿಯಲ್ಲಿ ಇವು ಕಾರ್ಯವೆಸಗುತ್ತವೆ. ಅವಳಲ್ಲಿಯ ಯಾವುದೇ ತರನಾದಂತಹ ಕೌಶಲ್ಯ, ಬುದ್ಧಿವಂತಿಕೆ, ಮುಂತಾದ ಕಲೆಗಳು ಮನೆಯ ನಾಲ್ಕು ಗೋಡೆಗಳ ಮಧ್ಯೆಯೇ ಉಳಿದುಬಿಡುತ್ತವೆ. ಕೇವಲ ಲೈಂಗಿಕತೆಯ ಹಿನ್ನಲೆಯೊಳಗೆ ಅವಳ ಮೇಲಿನ ಎಲ್ಲಾ ರೀತಿಯ ನೀತಿ ನಿರ್ಧಾರಗಳು ರೂಪುಗೊಂಡಿರುವ ಕಾರಣ ಮನೆಯ ಹೊರಗಿನ ಕಾರ್ಯಕ್ಷೇತ್ರ ಅವಳ ಪಾಲಿಗೆ ದುಸ್ತರವೇ ಆಗಿದೆ. ಗೃಹಬಂಧನ ಎಂದರೆ ಇಲ್ಲಿ ಮುಖ್ಯವಾಗಿ ಮಹಿಳೆಯನ್ನು ಹೊರಗಿನ ಬಾಹ್ಯ ಪ್ರಪಂಚದೊಂದಗಿನ ಎಲ್ಲ ವಿಧದ ಆರ್ಥಿಕ, ಸಾಮಾಜಿಕ, ಶೈಕ್ಷಣಿಕ, ಧಾರ್ಮಿಕ ನಾಗರಿಕ ವಿಷಯಗಳ ನಂಟನ್ನು ಅವಳಿಗೆ ದೊರಕಿಸದೆ ಮನೆಯೊಳಗೆ ಗೃಹಕೃತ್ಯಗಳಲ್ಲಿ ತೊಡಗಿಸುವುದು. ಅವಳಿಗೆ ಯಾವುದೇ ಬಗೆಯ ಸಾಮಾಜಿಕ ನಂಟಿನಿಂದ ದೂರವಿರುವುದು. ಈ ರೀತಿಯಾಗಿ ಸಾಮಾನ್ಯವಾಗಿ ಅವಳು ಇದ್ದರೂ ಇಲ್ಲದಂತೆಯೇ. ಯಾಕೆಂದರೆ ಮನುಷ್ಯರಿಗೆ ನೈಸರ್ಗಿಕವಾಗಿ ಯಾವ ಯಾವ ಹಕ್ಕುಗಳು ದೊರಕಿವೆಯೊ ಅವುಗಳ ಸಾಮಾನ್ಯವಾದ ಅರಿವು ಸಹ ಇವಳಿಗೆ ನೀಡುತ್ತಿಲ್ಲ. ನಾಲ್ಕು ಗೋಡೆಗಳ ಮಧ್ಯೆದಲ್ಲಿಯೇ ತನ್ನ ಕೌಶಲ್ಯಗಳನ್ನು ಗುರುತಿಸಿಕೊಳ್ಳುವ ಹಂತಕ್ಕೆ ಅವಳು ಬಂದು ತಲುಪಿದ್ದಾಳೆ.

ನಾನು ಕ್ಷೇತ್ರಕಾರ್ಯದ ಒಂದು ಸಂದರ್ಭದಲ್ಲಿ ಸಂದರ್ಶಿಸಿದ ಹೆಚ್.ಎಸ್.ಕ್ಯೂ ಎಂಬುವರು, ಇಸ್ಲಾಂನಲ್ಲಿ ಮಹಿಳೆಯರನ್ನು ಉನ್ನತ ವಿದ್ಯಾಭ್ಯಾಸ, ತಾಂತ್ರಿಕ ಶಿಕ್ಷಣದಿಂದ ಪ್ರತಿಷ್ಠಿತ ಸ್ಥಳಗಳಲ್ಲಿ ಹೊರಗಡೆ ಹೋಗಿ ದುಡಿಯಲು ಏಕೆ ಸಾಧ್ಯವಿಲ್ಲ ಎಂಬ ನನ್ನ ಪ್ರಶ್ನೆಯೊಂದಕ್ಕೆ ಉತ್ತರಿಸಿದ ಬಗೆ, ''ಇಸ್ಲಾಂನಲ್ಲಿ ಹೆಣ್ಣು ಮಕ್ಕಳನ್ನು **ಕೊಹಿನೂರ್** ವಜ್ರಕ್ಕಿಂತಲೂ ಅಮೂಲ್ಯ, ಅವರು ಅಷ್ಟೇ ಗುಪ್ತವಾಗಿ ಇರಬೇಕು, ಕೊಹಿನೂರ್ ವಜ್ರ ಎಲ್ಲೆಂದರಲ್ಲಿ ಸಿಗುತ್ತದಾ? ಇಲ್ಲ. ಹಾಗೆಯೇ ನಮ್ಮ ಹೆಣ್ಣು ಮಕ್ಕಳು, ಅವರನ್ನು ಪ್ರತಿ ಕೆಟ್ಟ ದೃಷ್ಠಿಗಳಿಂದಲೂ ತಪ್ಪಿಸಲು ಇಸ್ಲಾಂ ಬಯಸುತ್ತದೆ'' ಎಂದು ಹೇಳಿದರು.

ಹಾಗೆಯೇ ಇವರು ಹೇಳುವಂತೆ, ನಮ್ಮ ಹೆಣ್ಣು ಮಕ್ಕಳಿಗೆ ನಿಜವಾಗಲೂ ತಮ್ಮ ಗಂಡಂದಿರಿಗೆ ನೆರವಾಗಲು, ಇಚ್ಛೆಯಿದ್ದರೆ, ದುಡಿಯಲು ಹೊರಹೋಗಬೇಕಿಲ್ಲ, ಬದಲಾಗಿ ಮನೆಯಲ್ಲಿದ್ದುಕೊಂಡೇ ಸಿದ್ಧ ಉಡುಪುಗಳು, ಎಣಿಕೆಯ ವಸ್ತುಗಳನ್ನು ತಯಾರಿಸಿ, ಅಂಥವುಗಳಿಗೆ ಒಂದು ಮಾರುಕಟ್ಟೆಯ ವ್ಯವಸ್ಥೆ ಒದಗಿಸಿ, ಯೋಗ್ಯ ಬೆಲೆಯನ್ನು ಒದಗಿಸುವ ವ್ಯವಸ್ಥೆಯನ್ನು ಮಾಡಿಕೊಡಬೇಕೆಂದು ನಿರ್ಧರಿಸಿದೆ. ಇದು ಕರಾಚಿಯಲ್ಲಿ ನಡೆಸಲಾಗಿದೆ ಎಂದು ತಿಳಿಸಿದರು. ಅಂದರೆ ಈ ರೀತಿಯ ವ್ಯವಸ್ಥೆಯಿಂದ, ಹೆಣ್ಣು ಮಕ್ಕಳು ಮನೆಯಲ್ಲಿದ್ದುಕೊಂಡೆ, ಸಂಪಾದಿಸಿಕೊಂಡು, ಜೊತೆ ಜೊತೆಗೆ ಮಕ್ಕಳನ್ನು, ಮನೆಯವರೆಲ್ಲರನ್ನು ಚೆನ್ನಾಗಿ ನೋಡಿಕೊಳ್ಳಬಹುದಂತೆ,

ಹಾಗೆಯೇ ಇವರು ತಿಳಿಸಿಕೊಟ್ಟ ಮತ್ತೊಂದು ಅಪೂರ್ವವಾದ ಸಂಗತಿಯೆಂದರೆ, ಇಸ್ಲಾಂ ಮಹಿಳೆಯರಿಗೆ ಗಂಡನ ಮಾತು ಕೇಳುವುದು ಎಂದರೆ, ದೇವರಿಗಿಂತ ಮಿಗಿಲಾದದು ಎಂದು, ಅಂದರೆ ಒಂದು ವೇಳೆ ಆಕೆ ನಮಾಜ್‌ಗೆ ಕೂತಿದ್ದರೆ, ಗಂಡ ಏನಾದ್ರೂ ಕರೆದರೆ, ಆಗಲೂ ಸಹ ಆಕೆ ಬರಬೇಕು, ಬಂದು ವಿಚಾರಿಸಬೇಕಂತೆ. ಅಂದರೆ ಇಲ್ಲಿ ಇಸ್ಲಾಂ ಮಹಿಳೆಯರಿಗೆ, ಗಂಡನ ಮಾತು, ಆರೈಕೆ, ಎಲ್ಲಕ್ಕಿಂತಲೂ ಮಿಗಿಲಾಗಿದ್ದು, ಜೊತೆಗೆ ಗಂಡನು ಇವರ ಎಲ್ಲಾ ಯೋಗಕ್ಷೇಮಗಳನ್ನು ನೋಡಿಕೊಳ್ಳುವುದರಿಂದ, ಅವನಿಗೆ ಈ ಮಟ್ಟಕ್ಕೆ ಬದ್ಧಳಾಗಿರಬೇಕಾಗುತ್ತದೆ ಎಂಬ ನಂಬಿಕೆ ಇದೆ. ಆದರೆ ಸಾಮಾನ್ಯವಾಗಿ ಅಷ್ಟು ಸುಲಭವಾಗಿ ನಮಜ್‌ಗೆ ಕುಳಿತಾಗ ಕರೆಯುವುದಿಲ್ಲ ಎಂತಲೂ ಹೇಳಿದರು.

**೨.೫.೩. ಸ್ವತಂತ್ರವಾಗಿ ಬೆರೆಯುವಿಕೆ ಇಲ್ಲದಿರುವುದು**

ಮುಸ್ಲಿಂ ಮಹಿಳೆ ಕೌಟುಂಬಿಕ ಸಂಬಂಧಗಳ ಸಂಬಂಧ ಇಟ್ಟುಕೊಳ್ಳುವುದನ್ನು ಧಾರ್ಮಿಕ ನಿಯಮಗಳು ನಿರಾಕರಿಸುತ್ತವೆ. ಮುಸ್ಲಿಂ ಮಹಿಳೆಯಾದವಳು ತನ್ನ ಕುಟುಂಬದವರ ಹೊರತುಪಡಿಸಿದರೆ ಬೇರೆ ಯಾವುದೇ ವಿಧದಲ್ಲಿ ಮತ್ತೊಬ್ಬರೊಂದಿಗೂ ಬೆರೆಯಲಾರದಂತಹ ನಿರ್ಬಂಧಗಳು ಅವಳ ಮೇಲೆ ಹೇರಲಾಗಿದೆ ಶರಿಯತ್ ಅಥವಾ ಮುಸ್ಲಿಂ ಧಾರ್ಮಿಕ ನೀತಿ ಸಂಹಿತೆಯು ಸ್ತ್ರೀ ಪುರುಷರು ಪರಸ್ಪರ ಬೆರೆಯುವುದನ್ನು ಅತ್ಯಂತ ನಿರ್ಧಾಕ್ಷಣ್ಯವಾಗಿ ವಿರೋಧಿಸುತ್ತದೆ. ಸ್ತ್ರೀಯರು ಅತ್ಯಾಕರ್ಷಕ ವಸ್ತ್ರಧರಿಸಿ ಶೃಂಗಾರ ಮಾಡಿಕೊಂಡು ಮಾರ್ಗದಲ್ಲಿ ನಡೆಯುವುದು. ತನ್ಮೂಲಕ ಸಮಾಜದ ವಾತಾವರಣದಲ್ಲಿ ಅನೈತಿಕತೆಯೆಂದು ಇದು ನಿರ್ವಚಿಸಿಕೊಂಡಿದೆ ಎಂದು ಹೇಳುತ್ತಾರೆ. ಸಾಂಪ್ರದಾಯಿಕ ಶಿಕ್ಷಕಿ ಹಬೀಬಾ ಉಲ್.

ಮುಸ್ಲಿಂ ಧರ್ಮವು ಮಹಿಳೆಯರ ಕಾರ್ಯಕ್ಷೇತ್ರವನ್ನು ಸಂಪೂರ್ಣವಾಗಿ ಪ್ರತ್ಯೇಕಿಸಿದೆ. ಆದ್ದರಿಂದ ಅವಳಿಗೆ ಇಸ್ಲಾಂ ಕಾನೂನಿನಲ್ಲಿ ಬೇರೆಯವರೊಂದಿಗೆ ಸ್ವತಂತ್ರವಾಗಿ ಬೆರೆಯುವ ಅವಕಾಶಗಳನ್ನು ನಿರಾಕರಿಸಲಾಗಿದೆ, ಎಂದಾದರೂ ಸ್ತ್ರೀ ಪುರುಷರು ಒಂದಾಗಿ ಕೆಲಸ ಮಾಡಬೇಕು. ಎಂಬುದು ಅನಿವಾರ್ಯವಾದರೆ, ಪರಸ್ಪರರು ಬೆರೆಯುವಿಕೆಯಿಂದ ದೂರವಿರಬೇಕು ಎಂಬ ಇಸ್ಲಾಮಿ ಕಟ್ಟಾಜ್ಞೆ ಇದೆ. ಈ ರೀತಿಯಾದಂತಹ ನಿಲುವುಗಳು ಸ್ತ್ರೀ ಪುರುಷರ ನಡುವಿನ ಸ್ವಚ್ಛಂದ ವಾತಾವರಣವನ್ನು ಕಲುಷಿತಗೊಳಿಸುವಲ್ಲಿ ಪರೋಕ್ಷವಾಗಿ ಸಹಾಯ ಮಾಡುತ್ತವೆ, ಎಂಬುದನ್ನು ಮರೆಯಬಾರದು. ಇಂತಹ ಧೋರಣೆಗಳು ಹಾಗೂ ಕಟ್ಟಾಜ್ಞೆಗಳು ಮಹಿಳೆಯನ್ನು ಇನ್ನಷ್ಟು ಆಪತ್ತಿಗೆ ಸಿಲುಕಿಸಿವೆ. ಮುಖ್ಯವಾಗಿ ಸ್ತ್ರೀ ಪುರುಷರು ಬೆರೆಯುವ ಕ್ಷೇತ್ರಗಳೆಂದರೆ ಧಾರ್ಮಿಕ, ಆರ್ಥಿಕ, ಶೈಕ್ಷಣಿಕ, ರಾಜಕೀಯ ರಂಗಗಳಲ್ಲಿ ಆದರೆ ಸ್ತ್ರೀ ಪುರುಷರ ಬೆರೆಯುವಿಕೆಗೆ ಇರುವ ಈ ರೀತಿಯ ನಿರ್ಬಂಧಗಳು ಅವಳನ್ನು ಇಂತಹ ಅತ್ಯುನ್ನತ ಕ್ಷೇತ್ರಗಳಿಂದ ದೂರ ಸರಿಸುವ ಮೂಲಕ ಅದರ ಒಡೆತನ ಪುರುಷನ ಪಾಲಾಗಿ ಇವಳು ದೂರವೇ ಉಳಿವಂತೆ ಮಾಡಲಾಗಿದೆ. ಪರಸ್ಪರರ ದೃಷ್ಟಿ ಬೀಳದೆ ಇರುವ ರೀತಿಯಲ್ಲಿ ಕೆಲವು ಕೆಲಸಗಳನ್ನು ಮಾಡಲು ಅನುವು ಮಾಡಿಕೊಟ್ಟಿದೆಯಾದರೂ ಅಲ್ಲಿಯೂ ಕೆಲವು ನಿರ್ಬಂಧನೆಗಳನ್ನು ವಿಧಿಸಿದೆ. ಅಲ್ಲದೆ ಆಧುನಿಕ ಕುಲೀನ ಕುಟುಂಬದ ಹೆಣ್ಣುಮಕ್ಕಳನ್ನು ವ್ಯಾಪಾರದಲ್ಲಿ ತೊಡಗಿಸುವುದನ್ನು ಸಹ ಇಸ್ಲಾಂ ವಿರೋಧಿಸುತ್ತದೆ.

ಮದರಸಾ (ಕಲಿಕಾ ಸ್ಥಳಕ್ಕೆ ಕರೆಯುವ ಹೆಸರು)ದಲ್ಲಿ ಮಹಿಳೆಯರಿಗೆ ಖುರಾನ್ ಕಲಿಸುವ ಶಿಕ್ಷಕಿಯ ಪ್ರಕಾರ, ಮುಸ್ಲಿಂ (ಪ್ರತಿ) ಮಹಿಳೆಯು ಬುರ್ಕಾವನ್ನು ಕಡ್ಡಾಯವಾಗಿ ಧರಿಸಬೇಕು, ಅಗತ್ಯ ವಿದ್ದಾಗ ಮಾತ್ರ ತಾನು ಇತರ ಯಾರೊಂದಿಗಾಗಲಿ ಮಾತಾಡುವ ಸಂದರ್ಭ ಬಂದರೆ ತನ್ನ ಮುಖವನ್ನು, ಕೈಗಳನ್ನು ಬಳಸಬಹುದು. ಪರದಾದಿಂದ ಸ್ವಲ್ಪ ವಿನಾಯತಿ ಹೊಂದಿ ವ್ಯವಹರಿಸಬಹುದು, ಈಕೆ ಹೇಳುವ ಪ್ರಕಾರ ಮಹಿಳೆಯರು ಹೀಗಿರುವುದರಿಂದ ಅತಿಸುರಕ್ಷಿತ ಈ ಪುರುಷ ಸಮಾಜದಲ್ಲಿ.

ಸ್ವಾತಂತ್ರ್ಯ ಎಂಬುದು ಕೇವಲ ಒಂದೇ ಕಡೆ ಚಲಾಯಿಸುವಂತಹ ಸಾಧನವಾಗಿ ಇಸ್ಲಾಂನಲ್ಲಿ ಮನೆಮಾಡಿಕೊಂಡಿದೆ. ಅದಕ್ಕಾಗಿಯೆ ಮುಸ್ಲಿಂ ಮಹಿಳೆಯು ಸ್ವಾತಂತ್ರ್ಯ ಎಂಬ ಪರಿಕಲ್ಪನೆಯನ್ನು ಅರಿಯದ ಸ್ಥಿತಿಗೆ ಬಂದು ತಲುಪಿದ್ದಾಳೆಂದರೆ ತಪ್ಪಾಗಲಾರದು. ಮನುಷ್ಯನ ಮನೋದೌರ್ಬಲ್ಯವನ್ನು ಮನಗಂಡು ಇಸ್ಲಾಂ ಸ್ತ್ರೀ ಪುರುಷರು ಬೆರೆಯುವುದನ್ನು ನಿಷೇಧಿಸಿದೆ ಎನ್ನಲಾಗಿದೆ. ಆದರೆ ಇಲ್ಲಿ ಮತ್ತೊಂದು ಪ್ರಶ್ನೆ ಏಳಬಹುದು. ಅದೇನೆಂದರೆ, ಇದು ಕೇವಲ ಸ್ತ್ರೀ ಸಮಾನ ವಯಸ್ಕ ಪುರುಷರೊಂದಿಗೆ ಮಾತ್ರವಲ್ಲದೆ ಬದಲಿಗೆ ಅವಳು ಸಮಾಜದ ಯಾವುದೇ ಪುರುಷರೊಂದಿಗೆ ಬೆರೆಯಬಹುದೇ, ಅದಕ್ಕೂ ಸಹ ಇಸ್ಲಾಂ ನಿಲುವುಗಳು ಅವಕಾಶ ನೀಡಿಲ್ಲ. ಈ ರೀತಿಯ ಪರಿಸ್ಥಿತಿ ಇರುವಾಗ ಒಬ್ಬ ಮಹಿಳೆಯಾಗಿ ಅವಳು ಧಾರ್ಮಿಕ ನಿಲುವುಗಳನ್ನು ಎದುರಿಸುವುದಾದರೂ ಹೇಗೆ, ಮುಸ್ಲಿಂ ಮಹಿಳೆಯು ತನ್ನ ಪತಿ, ತಂದೆ ಅಥವಾ ಮನೆಯ ಹಿರಿಯನ ಒಪ್ಪಿಗೆಯ ಮೇರೆಗೆ ಮನೆಯ ಹೊರಗಿನ ಕೆಲವು ಶೈಕ್ಷಣಿಕ, ಸಾಮಾಜಿಕ, ಧಾರ್ಮಿಕ ಚಟುವಟಿಕೆಗಳಲ್ಲಿ ಸೀಮಿತವಾಗಿ ಭಾಗವಹಿಸಬಹುದು. ಆದರೆ ಅಂತಿಮವಾಗಿ ಇವೆಲ್ಲವುಗಳ ಮೇಲೆ ನಿರ್ಧಾರಗಳು ಅವಳ ಯಜಮಾನನದೇ ಆಗಿರುತ್ತದೆ ಎಂದು ತಿಳಿದುಕೊಂಡಿದ್ದೇನೆ.

ಭಗಂವತನ ಹೆಸರಿನಲ್ಲಿ ರೂಪಿತವಾಗಿರುವ ಧರ್ಮಶಾಸ್ತ್ರಗಳನ್ನು ಯಾವ ಮಹಿಳೆ ಹೊಡೆದು ಹಾಕಿ ತನ್ನದೇ ಆದ ಸ್ವತಂತ್ರ ವಿಚಾರಧಾರೆಯೊಂದಿಗೆ ಮುಂದುವರೆಯುತ್ತಾಳೋ ಆಕೆಯ ಪ್ರತಿಯೊಂದು ಹೆಜ್ಜೆಯೂ ಇಸ್ಲಾಂನ ದೃಷ್ಟಿಯಲ್ಲಿ ದೇವರ ಆಜ್ಞೆಯನ್ನು ಉಲ್ಲಂಘನೆ ಮಾಡಿದಂತೆಯೇ ಅಲ್ಲದೆ ಅದು ವಿನಾಶದ ಅಂಚಿಗೆ ತಳ್ಳುತ್ತದೆ ಪುಣ್ಯದ ಕೆಲಸವಾಗಿದ್ದರೂ ಸಹ. ಇಂತಹ ಅಮಾನವೀಯ ಅವಸ್ಥೆಗಳನ್ನು ಅವಳು ಎದುರಿಸುವ ಸ್ಥಿತಿಯಲ್ಲಿಯೂ ಇಲ್ಲ ಇದಕ್ಕೆ ಉತ್ತಮ ಉದಾಹರಣೆ ಎಂದರೆ ತಸ್ಲೀಮಾ ನಸ್ರೀನ್ ಎಂಬ ಬಾಂಗ್ಲಾದೇಶಿ ಲೇಖಕಿಯನ್ನು ನಾವು ಗಮನಿಸಬಹುದು. ಇವರು ಮುಸ್ಲಿಂ ಸಮುದಾಯದಲ್ಲಿ ಮನೆಮಾಡಿಕೊಂಡಿದ್ದ ಅವೈಚಾರಿಕ ಅನಾಚರಗಳನ್ನು ಎತ್ತಿ ಹಿಡಿದಿದ್ದರಿಂದಲೇ ಮುಸ್ಲಿಂ ಮೂಲಭೂತವಾದಿಗಳ ಕೆಂಗಣ್ಣಿಗೆ ಗುರಿಯಾಗಿ ಇದ್ದ ದೇಶವನ್ನು ಬಿಟ್ಟು ದೇಶಾಂತರ ತಿರುಗುತ್ತಿರುವುದು ಕಣ್ಣು ಮುಂದೆಯೇ ಇದೆ. ಧಾರ್ಮಿಕ ವಿಚಾರಗಳನ್ನು ಅಥವಾ ಕಟ್ಟಳೆಗಳಿಗೆ ವಿರುದ್ಧವಾಗಿರುವವರು ಸ್ತ್ರೀ ಪುರುಷರು ಯಾರೇ ಆಗಿರಲಿ ಅವರು ಅಪರಾಧಿಗಳೇ ಎಂಬ ರೀತಿಯಲ್ಲಿ ಶರಿಯತ್‌ನ ನಿಲುವುಗಳ ನಿರ್ವಚಿಸಲ್ಪಟ್ಟಿವೆ. ಯಾಕೆಂದರೆ ತಸ್ಲಿಮಾ ನಸ್ರೀನ್‌ಗಳಂತೆ ಸಲ್ಮಾನ್ ರಶ್ದಿಯು ಸಹ ಇಂತಹ ಮೂಢ ಅಂಧಾನುಚರಣೆಗಳ ವಿರುದ್ಧ ಬರೆದಿದ್ದರಿಂದಲೇ ಅವರನ್ನು ದೇಶದಿಂದ ಹೊರದಬ್ಬಲಾಯಿತು.

ಧಾರ್ಮಿಕ ಮೌಲ್ಯಗಳು ಹಾಗೂ ಕಟ್ಟಳೆಗಳು ರೂಪುಗೊಂಡಿರುವ ವಿಚಾರವನ್ನು ನಾವು ಒಂದು ಸಾರಿ ಅವಲೋಕಿಸಿದಾಗ ಅಲ್ಲಿಯ ತಾರತಮ್ಯತೆಯ ಅರಿವು ಬರುತ್ತದೆ. ಸ್ವತಃ ಮಹ್ಮದ್‌ರೆ ಮಹಿಳೆಯೊಂದಿಗೆ ಬೆರೆಯುವದನ್ನು ಸಹಿಸುತ್ತಿರಲಿಲ್ಲ. ನಾನು ಸ್ತ್ರೀಯರೊಂದಿಗೆ ಕೈ ಕುಲುಕುವುದಿಲ್ಲ ನಾನು ನೂರು ಮಹಿಳೆಯರನ್ನು ಉದ್ದೇಶಿಸಿ ಮಾತನಾಡುವುದನ್ನು ಪ್ರತಿಯೊಬ್ಬ ಮಹಳೆಗೆ ಹೇಳಿದಂತೆಯೇ, ಹಾಗೆಯೇ ಧಾರ್ಮಿಕ ಸಮಾರಂಭಗಳಲ್ಲಿ ಪರಸ್ಪರರು ದೃಷ್ಟಿಹಾಯಿಸದೆ ಇರಲಿ, ಎನ್ನುವ ಉದ್ದೇಶದಿಂದ ಛತ್ರದ ನಡುವೆ ಒಂದು ಅಡ್ಡ ಪರದೆ ಇರಬೇಕು ಎಂದಿದ್ದಾರೆ. (ಇಬ್ರಾಹಿಂ ಸಯೀದ್)[೧] ಆದ್ದರಿಂದಲೇ ಸ್ತ್ರೀ ಪುರುಷರು ಕೈ ಬೆರೆಸುವುದು ನಿಷೇಧವೆಂದೆ ಪರಿಗಣಿತವಾಗಿದೆ. ಶಿಕ್ಷಣ, ತರಬೇತಿ, ಕಲೆ ಸಂಸ್ಕೃತಿ, ರಾಜಕೀಯ, ದೇಶರಕ್ಷಣೆಯ ಕಾರ್ಯವಾಗಲಿ ಎಲ್ಲಿಯೂ ಸ್ತ್ರೀ ಪುರುಷರು ಪರಸ್ಪರ ಬೆರೆಯುವಿಕೆಯನ್ನು ಹಾಗೂ ಸ್ಪರ್ಶಿಸುವಿಕೆಯನ್ನು ತಡೆಹಿಡಿಯಲಾಗಿದೆ.

ಮುಸ್ಲಿಂ ಮಹಿಳೆ ಪುರುಷರೊಂದಿಗೆ ಸೈನಿಕ ತರಬೇತಿ, ಆಟೋಟಗಳು, ಕಠಿಣ ಪ್ರವಾಸಗಳನ್ನು ಕೈಗೊಳ್ಳುವಂತಿಲ್ಲ, ಈ ರೀತಿಯಾಗಿ ಸ್ತ್ರೀ ಪುರುಷರು ಪರಸ್ಪರವಾಗಿ ಎಲ್ಲಾ ಕ್ಷೇತ್ರಗಳಲ್ಲಿ ಭಾಗವಹಿಸುವುದನ್ನು ನಿಷೇಧಿಸುವ ಧಾರ್ಮಿಕ ಕಟ್ಟಳೆಗಳು ಮಹಿಳೆಯು ಒಂಟಿಯಾಗಿರಲು ಪರೋಕ್ಷವಾಗಿ ಸಹಾಯಮಾಡಿವೆ. ಇದು ಸಮಾಜದ ಪಿತೃಪ್ರಧಾನತೆಯು ರೂಪಿಸಿ ಜಾರಿಗೊಳಿಸಿರುವ ರಾಜಕಾರಣವೇ ಆಗಿದೆ. ಅವಳನ್ನು ಎಲ್ಲಾ ರಂಗಗಳಿಂದ ದೂರ ಮಾಡುವ ಹುನ್ನಾರವೇ ಇದು, ಎಂದರೆ ತಪ್ಪಾಗಲಾರದು.

''ಧಾರ್ಮಿಕ ನಿರ್ಬಂಧಗಳು, ನಿಷೇಧಗಳ ನಡುವೆ ಉಸಿರುಗಟ್ಟುವ ವಾತಾವರಣದಲ್ಲಿ ಮುಸ್ಲಿಂ ಮಹಿಳೆ ರೋಸಿ ಹೋಗಿದ್ದಾಳೆ. ಮುಸ್ಲಿಂ ಸಮಾಜದ ಸಾಂಪ್ರದಾಯಿಕ ಕೌಟುಂಬಿಕ ಚೌಕಟ್ಟಿನಲ್ಲೇ ಕಮರಿ ಹೋಗುವ ವ್ಯಕ್ತಿತ್ವದ ಚಿತ್ರಣ (ಸಾರಾರವರ ''ಚಪ್ಪಲಿಗಳು'' ಕತೆಯಲ್ಲಿ ಚಿತ್ರಿತವಾಗಿದೆ). ಹೆಣ್ಣು ಕೇವಲ ಸಂತಾನ, ದುಡಿತಕ್ಕಿರುವ ಜೀತದಾಳಿಗಿಂತ ಭಿನ್ನವಾದ ವ್ಯಕ್ತಿತ್ವ ಅವಳಲ್ಲಿದೆ. ಅವಳ ಪ್ರತಿಭಟನೆ ಗಣನೆಗೆ ತೆಗೆದುಕೊಳ್ಳುವುದಿಲ್ಲ.

''ಚಪ್ಪಲಿಗಳು'' ಕಥೆಯಲ್ಲಿ ಮುಸ್ಲಿಂ ಮಹಿಳೆ ತನ್ನ ಗಂಡನೊಂದಿಗೆ ಬುರಖಾ ಹಾಕಿಕೊಳ್ಳದೇ ಸಿನಿಮಾ ನೋಡಲು ಹೊರಗೆ ಬಂದ ಕಾರಣಕ್ಕಾಗಿಯೇ ಸಾಕಷ್ಟು ನೋವು ಅವಮಾನಗಳನ್ನು ಸಹಿಸಬೇಕಾಗುತ್ತದೆ. ಹೆಂಗಸರನ್ನು ಕಾಲಿನ ಚಪ್ಪಲಿಯಂತೆ ಬಳಸಿಕೊಳ್ಳಬೇಕು. ಬೇಕಾದಾಗ ಉಪಯೋಗಿಸಿ ಬೇಡವಾದಾಗ ಮೂಲೆಯಲ್ಲಿ ಬಿಟ್ಟು ಬಿಡಬೇಕು. ಅದು ಬಿಟ್ಟು ತಲೆಯ ಮೇಲಿಟ್ಟುಕೊಂಡರೆ ಓಗೆ, ಚಪ್ಪಲಿಯನ್ನು ಎಲ್ಲಿಡಬೇಕೋ ಅಲ್ಲೇ ಇಡಬೇಕು. ಹೀಗೆ ಮಹಿಳೆ ನಾಲ್ಕು ಗೋಡೆಗಳ ಮಧ್ಯೆ ಬಂಧಿಯಾಗಬೇಕೋ ಅಥವಾ ಅದನ್ನು ವಿರೋಧಿಸಬೇಕೊ ಅದರಲ್ಲೇ ಬದುಕಿದರೆ ಸತ್ತಂತಹ ಬದುಕು ಬದಲಾವಣೆ ಇಲ್ಲ. ಅದನ್ನು ಬಿಟ್ಟು ಹೊರಬರಬೇಕೆಂದರೆ, ಮೂಲಭೂತವಾದಿ ಸಮಾಜದ ಧಾರ್ಮಿಕ ಕಟ್ಟಳೆಗಳಿವೆ. ಇಂತಹ ಸಂದಿಗ್ಧಗಳ ಮೂಲಕ ಸಾವಿರಾರು ವರ್ಷಗಳಿಂದ ಮುಸ್ಲಿಂ ಮಹಿಳೆ ಸಹಿಸುತ್ತಾ ಬಂದ ಸಮಾಜದ ಚಿತ್ರಣವಿದೆ.

ಮುಸ್ಲಿಂ ಮಹಿಳೆಯ ಧಾರ್ಮಿಕ ಶೋಷಣೆಯ ಕುರಿತು ಬರೆದಿರುವ ಸಾರಾರವರ ''ಚಪ್ಪಲಿಗಳು'' ಸ್ತ್ರೀಯ ಸುತ್ತ ಹೆಣೆದ ಕತೆಯಾಗಿದೆ. ಮುಸ್ಲಿಂ ಹೆಣ್ಣಿನ ನೋವುಗಳನ್ನು ಅತ್ಯಂತ ಸರಳವಾಗಿ ಮತ್ತು ಭಾವುಕರಾಗಿ ಚಿತ್ರಿಸುವಲ್ಲಿ ಸಾರಾ ಅವರ ಕಥೆ, ಕಾದಂಬರಿಗಳಲ್ಲಿ ಚಿತ್ರಿಸಿದ್ದಾರೆ. ಸಾರಾ ರವರ ಮುಸ್ಲಿಂ ಹೆಣ್ಣಿನ ಪಾತ್ರಗಳು ಸಾಂಪ್ರದಾಯಿಕ ಮಿತಿಯಲ್ಲೇ ವರ್ತಿಸಿದರೆ, ಬಾನುರವರ ಮುಸ್ಲಿಂ ಹೆಣ್ಣಿನ ಪಾತ್ರಗಳು ಸಂಪ್ರದಾಯ ಮೀರುವ ಪ್ರಯತ್ನ ಮಾಡುತ್ತವೆ.

ಮುಸ್ಲಿಂ ಸಮಾಜದಲ್ಲಿ ರೋಗದಂತೆ ಹಬ್ಬಿರುವ ಸಮಸ್ಯೆಯನ್ನೇ ಕಾದಂಬರಿಯ ವಸ್ತುವಾಗಿ ಆಯ್ಕೆ ಮಾಡಿದ್ದಾರೆ. ಮುಸ್ಲಿಂ ಸಮಾಜದ ಅರಬರು ತಮ್ಮ ನಾಡಿನಲ್ಲಿ ನೀಡಬೇಕಾದ ದೊಡ್ಡ ಮೊತ್ತದ ಮೆಹರ್ (ವಧುದಕ್ಷಿಣೆ) ಕೊಡಲು ಸಾಧ್ಯವಾಗದೇ ಭಾರತದ ಕಡಲ ತೀರಗಳಿಗೆ ವ್ಯಾಪಾರದ ದೃಷ್ಟಿಯಿಂದ ಬಂದು ಇಲ್ಲಿಯ ಬಡ ಹೆಣ್ಣು ಮಕ್ಕಳನ್ನು ನಿಕಾಹ್ ಮಾಡಿಕೊಂಡು ಒಂದೆರಡು ತಿಂಗಳು ಸುಖಿಸಿ, ನಂತರ ಅವರಿಗೆ ಧರ್ಮವೇ ನೀಡಿದ ''ಹಕ್ಕಿನ ತಲ್ಲಾಖ್'' ನೀಡಿ ಅವಳನ್ನು ಅನಾಥಳನ್ನಾಗಿಸಿ, ಅವನದೊಂದು ಕಾಣಿಕೆಯಾಗಿ ಬದುಕೆಲ್ಲಾ ಅವನ ಪಾಪವನ್ನು ನೆನಪಿಸುವ ಕೂಸಿನ ಜವಾಬ್ದಾರಿಯನ್ನು ಹೊರಿಸಿ ಹೋಗುವ ಹೃದಯ ಹಿಂಡುವ ಸಮಸ್ಯೆಯೊಂದು ಕಟ್ಪಾಡಿಯವರ ''ಸರಕುಗಳು'' ಕಾದಂಬರಿಯ ಕಥಾವಸ್ತು. ಇದು ಭಾರತೀಯ ಮುಸಲ್ಮಾನರ ವಾಸ್ತವ ಕೂಡ ಆಗಿದೆ.

ವಿಧವೆಯಾಗುವ ಹೆಣ್ಣು, ವಿಧವೆಯಾಗುವ ಕಾರಣಕ್ಕಾಗಿಯೆ ಅನುಭವಿಸಬೇಕಾದ ತಿರಸ್ಕಾರ, ನೋವುಗಳನ್ನು ಪರಿಶೀಲಿಸಿದಾಗ, ವೈವಾಹಿಕ ಚೌಕಟ್ಟಿನೊಳಗಿನ ನೋವುಗಳು ಗಂಡಸಿನ ವ್ಯಭಿಚಾರಕ್ಕೆ ಧರ್ಮದ ರಕ್ಷೆಗಳನ್ನು ನೋಡಬಹುದು.''[೧೮]

ಅಲ್ಲಾಹ್ ನನ್ನು ಬಿಟ್ಟರೆ, ಭೂಮಿಯ ಮೇಲೆ ಹೆಣ್ಣಿಗೆ ಗಂಡನೆ ದೇವರು. ಗಂಡನ ಮೈ ಹುಣ್ಣುಗಳನ್ನು ಅವಳು ನಾಲಿಗೆಯಿಂದ ಕ್ಲೀನ್ ಮಾಡಿದರೂ ಪತಿಯ ಋಣ ತೀರುವುದಿಲ್ಲ. ಪತಿಯೇ ಪರದೈವ ಎಂಬ ಮೌಲ್ಯಗಳು ಇಸ್ಲಾಂ ಧರ್ಮದಲ್ಲಿಯೂ ಮನೆ ಮಾಡಿರುವುದರಿಂದಲೇ ಗಂಡಸು ಬಿಡು... ಎಂದು ಗಂಡಸಿಗೆ ಈ ಸಮಾಜ ಮಾಫ್ ಮಾಡುತ್ತದೆ.

ಮುಸ್ಲಿಂ ಸಮುದಾಯದಲ್ಲಿ ಪುರುಷರು ಸ್ತ್ರೀಯನ್ನು ಮನುಷ್ಯಳೆಂದು ಪರಿಗಣಿಸಲು ನಿರಾಕರಿಸುವ ಪುರುಷ ಪ್ರಾಧನ್ಯ ವ್ಯವಸ್ಥೆಯು ಜಟಿಲವಾಗಿದೆ. ಮುಸ್ಲಿಂ ಸಮಾಜದ ಮಹಿಳೆ ಹಲವಾರು ನಿಯಂತ್ರಣಗಳಡಿಯಲ್ಲಿ ಬದುಕುತ್ತಿದ್ದಾಳೆ. ಪುರುಷ ಆಶಯಗಳಿಗೆ ಚಾಲನೆ ದೊರೆತು ಸ್ತ್ರೀ ಪರ ಆಶಯಗಳು ಮೂಲೆ ಗುಂಪಾಗುತ್ತವೆ.

ಹಾಗೆಯೇ ಅಫಘಾನಿಸ್ತಾನಿ ಮಹಿಳೆಗೆ ಉಸಿರು ಕಟ್ಟುವ ವಾತವರಣವಿದೆ. ಬುರ್ಖಾ ಹಾಕದೆ ಹೊರಗೆ ಹೋಗುವಂತಿಲ್ಲ, ಶಾಲೆ ಕಲಿಯುವಂತಿಲ್ಲ, ನೌಕರಿ ಮಾಡುವಂತಿಲ್ಲ, ಪುರುಷರ ಜೊತೆ ಮಾತಾಡುವಂತಿಲ್ಲ, ಮುಕ್ತವಾಗಿ ಬೆರೆಯುವಂತಿಲ್ಲ. ತಾಲಿಬಾನಿಗಳ ಅಧಿಕಾರ ಹೋಗಿ ಅಮೇರಿಕಾ ಮಿತ್ರ ಬಣ ಅಧಿಕಾರಕ್ಕೆ ಬಂದರೂ ಸಹ ಅವಳು ಸ್ವತಂತ್ರ್ಯದ ಉಸಿರಾಡಬಹುದೆಂಬ ನಿರೀಕ್ಷೆಯೂ ಹುಸಿಯಾಗಿದೆ. ಅಲ್ಲಿಯೂ ನ್ಯಾಯಾಲಯ ಇನ್ನೂ ತಾಲಿಬಾನಿ ಶೈಲಿಯಲ್ಲೇ ಇದೆ.

ಮಹಿಳೆಗೆ ಶರಿಯಾ ಕಾನೂನಿನ ರೀತಿಯಲ್ಲೇ ಇಂದಿಗೂ ಶಿಕ್ಷೆ ಕಾದಿದೆ. ೧೯೭೦ರಲ್ಲಿ ಮದುವೆಯಾದ ನಂತರ ಹೆಣ್ಣು ಶಾಲೆಗೆ ಹೋಗುವಂತಿಲ್ಲ ಎಂಬ ಕಾನೂನು ಜಾರಿಗೊಳಿಸಿತ್ತು. ಈ ಕಾನೂನು ಚಲಾವಣೆಯಲ್ಲಿರಲಿಲ್ಲವಾದರೂ ಅಮೇರಿಕಾ ಮಿತ್ರ ಪಡೆಯ ಸರ್ಕಾರ ಈಗ ಅದನ್ನು ಪುನಃ ಜಾರಿಗೊಳಿಸಿದೆ. ಏಕೆಂದರೆ, ಮದುವೆಯಾದ ಹುಡುಗಿಯರು ಲೈಂಗಿಕ ವಿಷಯಗಳನ್ನು ಕಲಿಸಬಹುದೆಂಬ ಭಯವಿದೆಯಂತೆ, ಅವರು ಮನೆಯಲ್ಲಿದ್ದೇ ಪರೀಕ್ಷೆ ಕಟ್ಟಬಹುದಾದರೂ ಶಾಲೆಯಿಂದ ಕಿತ್ತು ಹೊರಹಾಕಲ್ಪಟ್ಟಿದ್ದಾರೆ. ಸಾರ್ವಜನಿಕವಾಗಿ ಹಾಡುವಂತಿಲ್ಲ, ಪುರುಷರಿಗೆ ಶಿಕ್ಷಕಿಯರಾಗುವಂತಿಲ್ಲ. ಟಿ.ವಿ.ಯಲ್ಲಿ ವಾರ್ತೆ ಓದುವಂತಿಲ್ಲ. ಇಲ್ಲ.... ಇಲ್ಲ.... ಇಲ್ಲ ಎಂಬ ನಿರಂತರ ನಿಷೇಧಗಳ ಮಧ್ಯೆ ಉಸಿರುಗಟ್ಟಿರುವ ಬದುಕು ಅವಳದು.

೧೫೦೦ ವರ್ಷಗಳ ಹಿಂದೆ ಅನಾಗರಿಕ ಅರಬ್ ಪುರುಷರಿಂದ ತಪ್ಪಿಸಿಕೊಳ್ಳಲು ಹಾಗೂ ತಮ್ಮ ಶ್ರೀಮಂತಿಕೆಯನ್ನು ಮರೆಸಲು ಮುಸ್ಲಿಂ ಮಹಿಳೆಯರು ಘೋಷಾ ಪದ್ಧತಿಯನ್ನು ಪ್ರಾರಂಭಿಸಿದರೆಂಬ ಅಭಿಪ್ರಾಯವಿದೆ. ಇದು ಇಂದು ಬಂಧನವಾಗಿದೆ. ಪ್ರವಾದಿ ಪೈಗಂಬರ್ ಸ್ತ್ರೀಯರಿಗೆ ರಕ್ಷಣೆಗಾಗಿ ಮನೆಗಳಲ್ಲಿರಲು ತಿಳಿಸಿದ್ದರು. ಆದರೆ ಗೃಹಬಂಧನ ಅವರಿಗೆ ಶಿಕ್ಷೆಯಾಯಿತು. ವಿದ್ಯಾಭ್ಯಾಸವನ್ನು ನಿರಾಕರಿಸಲಾಯಿತು. ಪತಿಯ ಪಾದಗಳಡಿಯಲ್ಲಿ ಸತಿಯ ಸ್ವರ್ಗ, ಪತಿಯ ಕಾಮತೃಪ್ತಿಗೆ ವಿರೋಧಿಸುವ ಪತ್ನಿಯನ್ನು ಎಲ್ಲಾ ದೇವತಾಗಳೂ ಶಪಿಸುತ್ತಾರೆ. ಇಹಲೋಕದಲ್ಲಿ ಯಾವ ಸುಖ, ಸೌಲಭ್ಯಗಳಿಗೂ ಆಸೆ ಪಡಬೇಡಿ, ಪರಲೋಕದಲ್ಲಿ ನಿಮಗೆ ಸಕಲೈಶ್ವರ್ಯಗಳೂ ಲಭ್ಯವಾಗುತ್ತವೆ. ಕುಟುಂಬ ನಿಯಂತ್ರಣ ಮಾಡದೆ, ದೈವಾರಾಧನೆ ಮಾಡುತ್ತಾ ಕಾಲಕಳೆಯಿರಿ, ಎಂದು ಭೋದಿಸಲಾಗುತ್ತದೆ. ಇಸ್ಲಾಂ ಧರ್ಮದಲ್ಲಿ ಅಸ್ಪೃಶ್ಯತೆ ಇಲ್ಲ. ಆದರೆ ಗುಲಾಮ ಪದ್ಧತಿಗೆ ಧರ್ಮದ ಅಂಗೀಕಾರವಿದೆ.

''ಬಹುಪತ್ನಿತ್ವ, ಲಿಂಗತಾರತಮ್ಯ ನೀತಿ, ಪರದಾ ಪದ್ಧತಿ, ಸುಲಭದಾ ವಿವಾಹ ವಿಚ್ಛೇದನದ 'ತಲಾಕ್' ಪದ್ಧತಿ, ಆಸ್ತಿಯ ಹಕ್ಕಿಲ್ಲದಿರುವುದು, ಧಾರ್ಮಿಕಾಚರಣೆ ಸಾಮುದಾಯಿಕ ಕ್ರಿಯಾಚರಣೆಗಳಲ್ಲಿ ಅವಕಾಶಗಳ ನಿರಾಕರಣೆ ಮುಂತಾದ ಸ್ತ್ರೀ ವಿರೋಧಿ ಧೋರಣೆಗಳಿಂದ ಮಹಿಳೆಯರ ಬದುಕು ಶೋಚನೀಯವಾಗಿಸಿದ ಇಸ್ಲಾಂ ಸಮಾಜವು, ನೀತಿ ಧರ್ಮ ಸಂಪ್ರದಾಯದ ಹೆಸರಿನಲ್ಲಿ ಮಹಿಳೆಯರನ್ನ ಗುಲಾಮಗಿರಿಗೆ ತಳ್ಳಿದೆ.''

ಈ ಜಗತ್ತಿನಲ್ಲಿ ಹುಟ್ಟಿದ ಪ್ರತಿಯೊಂದು ಜೀವಿಯೂ ತಾನು ಬದುಕಿರುವವರೆಗೆ ಸುಖದಿಂದ ಇರಬೇಕೆಂದು ಅಪೇಕ್ಷಿಪಡುತ್ತದೆ. ಆದರೆ ಹಿಂದಿನಿಂದಲೂ ನಂಬಿಕೊಂಡು ಬಂದ ನಮ್ಮ ಸಮಾಜದ (ಮುಸ್ಲಿಂ) ಕೆಲವು ರೂಢಿ ಪದ್ಧತಿಗಳು, ಸಂಪ್ರದಾಯಗಳು ನಮ್ಮ ಸಮಾಜದ ಮಹಿಳೆ ಸುಖದಿಂದ ವಂಚಿತಳಾಗುವಂತೆ ಮಾಡಿವೆ. ಪುರುಷ ಪ್ರಧಾನವಾದ ನಮ್ಮ ಸಮಾಜದಲ್ಲಿ ಪುರುಷರು ತಮ್ಮ ಅನುಕೂಲಕ್ಕೆ ತಕ್ಕಂತೆ ರೂಢಿ ಪದ್ಧತಿಗಳನ್ನು ಆಚರಣೆಯಲ್ಲಿ ತಂದು ಮಹಿಳೆಯರ ಶೋಷಣೆಗೆ ಕಾರಣರಾಗಿದ್ದಾರೆ.

ಇಸ್ಲಾಂ ಧರ್ಮದಲ್ಲಿ ವಿಧವೆಯರಿಗೆ ಉತ್ತಮ ಸ್ಥಾನಮಾನವಿದೆ. ಪುನರ್ವಿವಾಹಕ್ಕೆ ಧರ್ಮದಲ್ಲಿ ಒಪ್ಪಿಗೆಯಿದ್ದರೂ ಸಮಾಜದಲ್ಲಿ ಅದು ಕಷ್ಟಕರ. (ಹೆಣ್ಣು ಕನ್ಯೆಯಾಗಿರುವುದಿಲ್ಲ ಎಂಬುದು ಸಮಸ್ಯೆ) ಮಹಿಳೆಯರಿಗೆ ನಿರ್ಬಂಧ ಹೆಚ್ಚು. ಮುಸ್ಲಿಂ ಮಹಿಳೆಯರಿಗೂ ಸಹ ಪ್ರಗತಿ ಪಥದಲ್ಲಿರುವ ಇತರ ಧರ್ಮಗಳ ಮಹಿಳೆಯರಂತೆ ವಿದ್ಯಾಭ್ಯಾಸ, ಉನ್ನತ ಶಿಕ್ಷಣ, ದೊರೆತಲ್ಲಿ ಮುಸ್ಲಿಂ ಧಾರ್ಮಿಕ ವ್ಯವಸ್ಥೆಯೂ ಉದಾರ ಮನಸ್ಸಿನಿಂದ ತಮ್ಮಂತೆಯೇ ತಾಯ ಗರ್ಭದಿಂದ ಜನಿಸಿದ ಸ್ತ್ರೀಯರೂ ಮಾನವ ಜೀವಿಗಳೆಂಬ ಮನೋಭಾವ, ಮಾನವರ ಮೂಲಭೂತ ಹಕ್ಕುಗಳ ಅರಿವು ಬಂದರೆ ಪ್ರಾಯಶಃ ಮುಸ್ಲಿಂ ಮಹಿಳೆಯರು ಇನ್ನೂ ಬೆಳಕಿಲ್ಲದ ಪ್ರಪಂಚದಿಂದ ವಿಶಾಲ ಜಾಗತಿಕ ಭೂಪಟವನ್ನು ಕಾಣಬಹುದು.

''ಇಂದು ನಾವು ಕಾಣುತ್ತಿರುವ ಮುಸ್ಲಿಂ ಮಹಿಳಾ ಜಗತ್ತು ಅವಳ ಸ್ಥಾನ-ಮಾನ, ಹಕ್ಕು ಜವಾಬ್ದಾರಿಗಳು ಮೊದಲಿನಿಂದಲೂ ಹೀಗೆಯೇ ಇರಲಿಲ್ಲ. ಅದು ಅನೇಕ ಸಾಮಾಜಿಕ, ರಾಜಕೀಯ, ಆರ್ಥಿಕ ಮತ್ತು ಸಾಂಸ್ಕೃತಿಕ ಸ್ಥಿತ್ಯಂತರಗಳ ಪರಿಣಾಮ ಮುಸ್ಲಿಂ ಸಮಾಜದ ಮಹಿಳೆ ಒಂದು ಸ್ಥಿತಿಯಿಂದ ಇನ್ನೊಂದರ ಸ್ಥಿತಿಗೆ ಬದಲಾವಣೆ ಹೊಂದುವಾಗ ಅನೇಕ ಘರ್ಷಣೆಗಳೂ, ತಿಕ್ಕಾಟಗಳು ನಡೆಯುತ್ತವೆ. ಹಳೆಯದರ ಹೊಟ್ಟೆ ಸೀಳಿಕೊಂಡೇ ಹೊಸದರ ಜನ್ಮವಾಗುತ್ತದೆ. ಅನೇಕ ಹೋರಾಟಗಳೂ, ಸಂಘರ್ಷಗಳ ಪರಿಣಾಮವೇ ಇಂದಿನ ಮುಸ್ಲಿಂ ಮಹಿಳೆಯಾಗಿದ್ದಾಳೆ. ಅವಳ ಪಾತ್ರ ಕಾಲದಿಂದ ಕಾಲಕ್ಕೆ ಬದಲಾಗುತ್ತಲೇ ಬಂದಿದೆ.

ಭಾರತದಲ್ಲಿ ಬರಿ ಮುಸ್ಲಿಂ ಮಹಿಳೆ ಮಾತ್ರವಲ್ಲ ಅನ್ಯ ಸ್ತ್ರೀಯರ ಸ್ಥಾನ-ಮಾನ ತುಂಬಾ ವಿರೋಧಾಭಾಸದಿಂದ ಕೂಡಿದೆ, ವೇದಗಳ ಕಾಲದಲ್ಲಿ ದೇವತೆಯೆಂದು, ಪೂಜಿಸಲ್ಪಟ್ಟ ಹೆಣ್ಣು ಮುಂದೆ ಶೂದ್ರಳೆಂದು ಪರಿಗಣಿಸಲ್ಪಟ್ಟಳು, ಬಾಲ್ಯವಿವಾಹ, ಸತಿ ಪದ್ಧತಿ, ಬಹು ಪತ್ನಿತ್ವ, ಹಾಗೂ ಪರಕೀಯರ ದಾಳಿಯಿಂದಾಗಿ ಅವಳ ಜೀವನದಲ್ಲಿ ಅಂಧಕಾರದ ಯುಗ ಪ್ರಾರಂಭವಾಯಿತು, ಹೀಗೆಕಾಯಿತು? ಇದಕ್ಕೆ ಕಾರಣರಾರು? ಎಂಬುದಕ್ಕೆ ಹಿನ್ನಲೆಯಾಗಿ ಸಾವಿರಾರು ವರ್ಷಗಳ ಧೀರ್ಘ ಇತಿಹಾಸವೇ ಇದೆ.

ಪುರುಷ ಪ್ರಧಾನವಾದ ನಮ್ಮ ಸಮಾಜದಲ್ಲಿ ಪತಿಯೇ ಪರದೈವವೆಂದು ನಂಬಿದ ಮಹಿಳೆಗೆ, ಮುಕ್ತಿ ಮಾರ್ಗ ಪತಿ ಸೇವೆಯ ಮೂಲಕ ತೆರೆದಿರುವಾಗ, ಬೇರೆ ಉದ್ಧಾರದ ಹಂಬಲ ಆಕೆಗೆಲ್ಲಿಂದ ಬರಬೇಕು ಇಷ್ಟೇ ಅಲ್ಲದೆ, ಸೀತೆ ಸಾವಿತ್ರಿಯರಂಥ ಉದಾಹರಣೆಗಳನ್ನು ತೋರಿಸಿ ಮಹಿಳೆಯರನ್ನು ಸಂಪೂರ್ಣ ಪುರುಷನ ಅನುವರ್ತಿಯಾಗಿ ಮಾಡಿಕೊಳ್ಳಲಾಯಿತು. ಮಹಿಳೆಗೆ ಪೂಜ್ಯ ಸ್ಥಾನ ಕೊಟ್ಟಿದ್ದೇವೆ ಎಂದು ಹೇಳುತ್ತಲೇ ಅವಳ ವೈಚಾರಿಕ ಸ್ವಾತಂತ್ರ್ಯವನ್ನು ಅಪಹರಿಸಲಾಯಿತು.''[೨೦]

ಅದೇ ರೀತಿಯಲ್ಲಿ ಮುಸ್ಲಿಂ ಸಮಾಜದಲ್ಲಿ, ಮುಸ್ಲಿಂ ಮೌಲ್ಯಗಳಿಗೆ ವಿಪರೀತಾರ್ಥ ಕಲ್ಪಿಸಿ, ಪುರುಷರು ತಮ್ಮ ಅನೂಕೂಲಕ್ಕೆ ತಕ್ಕಂತೆ ಅರ್ಥೈಸಿದರು, ಪುರುಷ ವರ್ಗ ಧಾರ್ಮಿಕ ನೆಲೆಯಲ್ಲಿ ಅನೇಕ ಸಂಪ್ರದಾಯಗಳನ್ನು ಮಹಿಳೆಯರ ಮೇಲೆ ಹೊರೆಸಿದರು. ಅವರ ಸ್ಥಾನ-ಮಾನಗಳಿಗೆ ಒಂದು ಧಾರ್ಮಿಕ ದಿಗ್ಬಂಧನ ಹಾಕಲಾಗಿದೆ. ಮಹಿಳೆಯರಿಂದ ವಿದ್ಯಾಭ್ಯಾಸದ ಸ್ವಾತಂತ್ರ್ಯವನ್ನು ಕಸಿದುಕೊಂಡು, ಅವರು ಹುಟ್ಟಿರುವುದೇ ಪುರುಷರ ಸೇವೆಗಾಗಿ, ಭೋಗಕ್ಕಾಗಿ ಎಂಬ ಭಾವನೆಯನ್ನು ಬೆಳೆಸಿದರು. ಇಂತಹ ದಬ್ಬಾಳಿಕೆ ಮಹಿಳೆಯರ ದಾಸ್ಯಸ್ಥಿತಿಗೆ ರೂಢಿಯಾಗಿದೆ. ಮುಸ್ಲಿಂ ಮಹಿಳೆಯರು ತಮ್ಮ ದಾಸ್ಯ ಸ್ಥಿತಿಯನ್ನು ಸಹಜ ಸ್ಥಿತಿಯಂದೇ ತಿಳಿದು ಬಿಟ್ಟಿದ್ದಾರೆ.

ಒಟ್ಟಾರೆಯಾಗಿ ಆಯಾ ಧರ್ಮಗಳಿಗೆ ಅನುಗುಣವಾಗಿ ಮಹಿಳೆಯರ ಸ್ಥಾನ-ಮಾನ, ವೈಧವ್ಯದ ಆಚರಣೆಗಳು ಇವೆ, ಎಲ್ಲಾ ಧರ್ಮದಲ್ಲಿಯೂ ಸಹ ವಿಧವೆಯಾದವಳು ಹಿಂಸೆಯನ್ನು ಅನುಭವಿಸುತ್ತಿದ್ದಾಳೆ. ಹಾಗೆಯೇ ಶೈಕ್ಷಣಿಕ ಅವಕಾಶಗಳಿಂದ ವಂಚನೆ, ಲಿಂಗ ತಾರತಮ್ಯ, ಉಡುಪು ಸಂಹಿತೆ, ಹಲವಾರು ನಿರ್ಬಂಧನೆಗಳು ಪ್ರತಿ ಧರ್ಮಗಳಲ್ಲಿವೆ. ಆದರೆ ಹಿಂಸೆಯ ನಿರ್ಭಂಧನೆಗಳು ಸ್ವರೂಪಗಳು ಬೇರೆ ಬೇರೆ ರೀತಿಯಲ್ಲಿವೆ. (ಹಾಗೆ ನೋಡಿದರೆ ಬೌದ್ಧ ಮುಸ್ಲಿಂ ಧರ್ಮದ ಮಹಿಳೆಯರಿಗಿಂತಲೂ ಹಿಂದೂ ಧರ್ಮದ ಅದರಲ್ಲೂ ಬ್ರಾಹ್ಮಣ ಮಹಿಳೆಯರು ಈ ವೈಧವ್ಯಗಳಂತಹ ಕ್ರೂರ ಆಚರಣೆಗೆ ಒಳಪಟ್ಟಿದ್ದಾಳೆ)

ಆದರೆ ಇದಕ್ಕೆಲ್ಲ ವ್ಯತಿರಿಕ್ತವಾಗಿ ಇಂದು ವಿದ್ಯಾವಂತ ಮುಸ್ಲಿಂ ಮಹಿಳೆ, ಅರ್ಥವಿಲ್ಲದ ಅಂಧಾನುಕರಣೆಗಳನ್ನು ಬಿಟ್ಟು, ವೈಚಾರಿಕತೆಯನ್ನುಳಿಸಿಕೊಂಡು ಮತ್ತೊಬ್ಬರಿಗೆ ಮಾದರಿಯಾಗುವಂತೆ, ಬಾಳುವಲ್ಲಿ ಸಾರ್ಥಕತೆ ಇದೆ, ಒಳ್ಳೆಯದೆನ್ನುವುದು ಅದು ಹಿಂದಿನದೇ ಇರಲಿ, ಇಂದಿನದೇ ಇರಲಿ, ಅದನ್ನು ನಮ್ಮ ಬದುಕಿನಲ್ಲಿ ಅಳವಡಿಸಿಕೊಂಡು, ನಮ್ಮ ವ್ಯಕ್ತಿತ್ವವನ್ನು ರೂಪಿಸಿಕೊಳ್ಳುವುದರಲ್ಲಿ ಔಚಿತ್ಯವಿದೆ ಎನ್ನುವುದು ನನ್ನ ಅಭಿಪ್ರಾಯ.

**೨.೫.೪. ಆರ್ಥಿಕ ಸ್ಥಾನಮಾನ**

ಪುರುಷನನ್ನು ಆರ್ಥಿಕ ಮೂಲದಿಂದ ಶರಿಯತ್ ಗುರುತಿಸುತ್ತದೆ. ಈ ಕಾರಣದಿಂದಲೇ ಪುರುಷನಿಗೆ ಕೌಟುಂಬಿಕ, ಸಾಮಾಜಿಕ, ರಾಜಕೀಯ ಎಲ್ಲ ರಂಗಗಳ ಮಾಲೀಕತ್ವವನ್ನು ನೀಡಿರುವುದು, ಆರ್ಥಿಕ ಜವಾಬ್ದಾರಿಯಿಂದ ಶರಿಯತ್‌ಗಳು ಮಹಿಳೆಯನ್ನು ಮುಕ್ತವಾಗಿಟ್ಟಿವೆ, (ಕುರಾನ್ ೧೨, ೭) ಈ ಕಾರಣದಿಂದಲೇ ಅವಳ ಮೇಲಿನ ಅಧೀನತೆಯು ರೂಪುಗೊಂಡಿರುವುದು. ಮಹಿಳೆಯ ಅಧೀನತೆ ಎಂಬುದು ಆರ್ಥಿಕತೆಯೊಂದಿಗೆ ಬೆಸೆದುಕೊಂಡಿದೆ. ಆರ್ಥಿಕತೆಗೆ ಒಳಗಾಗಿರುವ ಪ್ರತಿಯೊಬ್ಬರು ವಿವಿಧ ನಮೂನೆಯ ಅಧಿಕಾರ, ಸ್ವಾತಂತ್ರ್ಯವನ್ನು ಹೊಂದಿರುತ್ತಾರೆ, ಆರ್ಥಿಕತೆ ಎಂಬುದು ಯಾರ ಅಧೀನದಲ್ಲಿರುತ್ತದೆಯೋ ಅವರೇ ಸಬಲರು ಎಂಬ ಮಾತು ಇಲ್ಲಿ ಅತ್ಯಂತ ಉಪಯೋಗಕಾರಿಯಾಗಿಯೂ ಬಳಸಬಹುದು, ಹೀಗೆ ಆರ್ಥಿಕತೆಯನ್ನು ಯಾವ ವರ್ಗವು ಹೊಂದಿರುತ್ತದೆಯೋ ಅದು ಆರ್ಥಿಕತೆಯಿಂದ ದೂರವಿರುವ ವರ್ಗವನ್ನು ಸದಾಕಾಲವೂ ತನ್ನ ಅಧೀನವಾಗಿಟ್ಟುಕೊಂಡು ತಾನು ಪ್ರಧಾನ ನೆಲೆಯಿಂದಲೆ ಅದನ್ನು ನಿಯಂತ್ರಿಸುತ್ತಿರುತ್ತದೆ. ಹಾಗೆ ಅದನ್ನು ಸದಾಕಾಲವು ನಿರ್ಲಕ್ಷತನದಿಂದಲೇ ನಡೆಸಿಕೊಂಡು ಬರುತ್ತದೆ. ಅಧೀನತೆ, ಪ್ರಧಾನತೆ, ಎಂಬ ಪರಿಕಲ್ಪನೆಗಳು ಮೂಡಿ ಬರಲು ಇದೇ ಕಾರಣವಾಗಿದೆ.

ಮುಸ್ಲಿಂ ಮಹಿಳೆಯನ್ನು ಸಾಮಾಜಿಕ ರಂಗಗಳಿಂದ ದೂರ ಮಾಡುವ ಮೂಲಕ ಅವಳ ಕೈಯಿಂದ ಆರ್ಥಿಕತೆಯನ್ನು ಸಹ ಕಸಿದುಕೊಳ್ಳಲಾಗಿದೆ, ಆದರೆ ಕೆಲವುಕಡೆಗಳಲ್ಲಿ ಅವಳಿಗೆ ಮನೆಯೊಳಗಿನ ಕೆಲವು ಗೃಹ ಚಟುವಟಿಕೆಗಳನ್ನು ಮಾಡಲು ಅವಕಾಶ ನೀಡಿದೆ, ಉದಾಹರಣೆಗೆ ಬೀಡಿ ಕಟ್ಟುವಿಕೆ, ಊದು ಬತ್ತಿ ತಯಾರಿಸುವುದು, ಮುಂತಾದವುಗಳನ್ನು ಗೃಹಕೃತ್ಯದ ನಂತರದ ವಿರಾಮದ ಸಮಯದಲ್ಲಿ ಮಾಡಲು ಅವಕಾಶ ನೀಡಿದ್ದರೂ ಅವಳ ದುಡಿಮೆಯು ಅಂತಿಮವಾಗಿ ಅವಳಿಗೆ ದೊರೆಯದೆ ಅವಳ ಮನೆಯ ಹಿರಿಯನಿಗೆ ಸಿಗುತ್ತದೆ, ಮಹಿಳೆಯ ಆರ್ಥಿಕತೆಯು ಅವಳ ಮನೆಯೊಳಗೆ ಮಾತ್ರವೇ ಮಾಡುವುದಾಗಿದ್ದರೆ, ಇದಕ್ಕೆ ಸಾಂಪ್ರದಾಯಿಕ ಮನಸ್ಸುಗಳು ಯಾವುದೇ ರೀತಿಯ ವಿರೋಧವನ್ನು ಮಾಡಲಾರವು ಎಂದು ಹೇಳುತ್ತಾರೆ. ವಕ್ರ ರಫೀಕ್.

ಗೃಹಕ್ಷೇತ್ರ ಹೊರತುಪಡಿಸಿದರೆ, ಸಾಮಾಜಿಕ ಕ್ಷೇತ್ರದಲ್ಲಿ ದುಡಿಯುವ ಅವಕಾಶವನ್ನು ಅವಳಿಗೆ ನೀಡಲಾಗಿಲ್ಲ, ಸಾಮಾಜಿಕ ಜೀವನದಲ್ಲಿನ ಎಲ್ಲಾ ಆರ್ಥಿಕ ಕ್ಷೇತ್ರಗಳು ಮಹಿಳೆಯು ದೂರ ಉಳಿಯುವಿಕೆಯಿಂದಾಗಿ ಅವಳಿಂದ ದೂರವೇ ಉಳಿದಿದೆ. ಹೊಸಪೇಟೆಯ ನೂರಾನಿ ಮಸೀದಿಯಲ್ಲಿರುವ ವ್ಯಕ್ತಿಯೋರ್ವರು ಕ್ಷೇತ್ರಕಾರ್ಯಕ್ಕೆಂದು ಭೇಟಿ ನೀಡಿದಾಗ ಈ ವಾಕ್ಯಗಳಿಗೆ ಪೂರಕವಾಗಿ ಉತ್ತರಿಸಿದ್ದಾರೆ, ಮುಸ್ಲಿಂ ಮಹಿಳೆಯರು ಆಚೆ ಹೋಗಿ ಕೆಲಸ ಮಾಡುವ ಅವಶ್ಯಕತೆ ಇಲ್ಲ ಆಕೆ ತನ್ನ ಮಕ್ಕಳನ್ನು ನೋಡಿಕೊಂಡು ಅವರಿಗೆ ಉತ್ತಮ ಭವಿಷ್ಯವನ್ನು ಒದಗಿಸಿಕೊಡುವಂತಹ ಮೇರು ಜವಾಬ್ದಾರಿ ಅವಳ ಮೇಲಿದೆ ಎಂದು ಹೇಳಿದರು.

ಮುಸ್ಲಿಂ ಮಹಿಳೆಗೆ ಧಕ್ಕದ ಎಲ್ಲಾ ಅವಕಾಶಗಳನ್ನು ಪುರುಷನು ತನ್ನ ಅಧೀನಪಡಿಸಿಕೊಂಡಿದ್ದಾನೆ, ಧರ್ಮದ ನಿರ್ಮಾತೃಗಳು ಅತ್ಯಂತ ಚಾಣಾಕ್ಷವಾಗಿ ವಿಧಿಬದ್ಧ ಕಾನೂನುಗಳನ್ನು ರೂಪಿಸಿ ಅವುಗಳನ್ನು ಮಹಿಳೆಯರ ಮೇಲೆ ಹೇರುವುದರ ಮೂಲಕ ಅವಳ ಗೃಹ ಹಾಜರಿಯ ಎಲ್ಲಾ ರಂಗಗಳ ಮಾಲೀಕತ್ವಕ್ಕೆ ಪುರುಷನನ್ನೆ ಅವಿರೋಧವಾಗಿಯು ಆರಿಸಿಕೊಂಡಿದೆ, ಇದು ಪರಂಪರಾಗತವಾಗಿ ಬಂದಿರುವಂತಹ ನಡವಳಿಕೆ ಎಂದು ಗುರುತಿಸಬಹುದು ಅವಳ ಮೇಲೆ ವಿವಿಧ ನೀತಿ ನಿರೂಪಣೆಗಳನ್ನು ಯಥಾವತ್ತಾಗಿ ಹೇರುವ ಮೂಲಕ ಅವಳನ್ನು ಸಮುದಾಯದ ಜೀವನದಿಂದಲೇ ದೂರ ಇಟ್ಟಿದ್ದಾನೆ. ಆರ್ಥಿಕತೆಯು ವ್ಯಕ್ತಿಗಳ ವ್ಯಕ್ತಿತ್ವವನ್ನು ರೂಪಿಸುವ ಅತ್ಯುನ್ನತ ಸಾಧನವಾಗಿರುವುದರಿಂದ ಇದರ ಏಕ ಮುಖಿಯಾದ ಚಲನೆಯೊಂದಿಗೆ ಪರಿಪಾಲಿತವಾಗುತ್ತಲೇ ಸಾಗುತ್ತಿದೆ.

''ಮುಸ್ಲಿಂ ಮಹಿಳೆ ನೀಡಿರುವಂತಹ ಆದರ್ಶ ಗೃಹಿಣಿಯ ಪಾತ್ರವು ಧರ್ಮಸಮ್ಮತವೂ ಹಾಗೂ ನ್ಯಾಯುತವಾಗಿರುವುದರಿಂದ ಅದು ಅವಳಿಗೆ ದೈವವೇ ನಿರ್ಣಯಿಸಿ ನೀಡಿದ ವರ ಎನ್ನುವ ರೀತಿಯಲ್ಲಿ ನಿರೂಪಿತವಾಗಿದೆ, ಸಾಮಾಜಿಕ ಜೀವನದಲ್ಲಿ ಅವಳು ಯಾವುದೇ ವ್ಯಕ್ತಿ ಇರಲಿ ಅವರಿಗೆ ಆರ್ಥಿಕತೆಯಿಂದ ಆಯಾ ಸಮಾಜ, ಸಮುದಾಯಗಳಲ್ಲಿ ಒಂದು ಗೌರವಯುತವಾದ ಸ್ಥಾನಮಾನ ದೊರೆಯುತ್ತದೆ. ವಿಶೇಷವಾಗಿ ಆರ್ಥಿಕತೆಯ ಹೊರೆಯಿಂದ ಸ್ತ್ರೀಯನ್ನು ಮುಕ್ತಗೊಳಿಸಿದ ಕಾರಣ ಅವಳಿಗೆ ಅದರ ಗಂಧವೂ ಸಹ ಸಿಗಲು ಸಾಧ್ಯವಾಗಿಲ್ಲ. ಅವಳಿಗೆ ಕೆಲವು ವೇಳೆ ಹೊರಗಿನ ಕಾರ್ಯಚಟುವಟಿಕೆಗಳಲ್ಲಿ ಭಾಗವಹಿಸುವ ಇರಾದೆ ಇದ್ದರೂ ಸಹ ಅದನ್ನು ಅಭಿವ್ಯಕ್ತಗೊಳಿಸುವ ಅವಕಾಶ ಅಥವಾ ಸ್ವಾತಂತ್ರ್ಯವೂ ಸಹ ಅವಳಿಗಿಲ್ಲ.''[೨೧]

'ಸಾಮಾಜಿಕತೆ' ಎಂಬುದರಲ್ಲಿಯೆ ಬಹುದೊಡ್ಡ ತೊಡಕಿದೆ. ಪುರುಷರ ಅಸ್ತಿತ್ವದೊಂದಿಗೆ ಮಹಿಳೆಯರ ಅಸ್ತಿತ್ವವನ್ನು ಗುರ್ತಿಸುವುದು ಸನಾತನ ಕಾಲದಿಂದಲೂ ಬೆಳೆದು ಬಂದಿರುವುದೇ ಸಾಮಾಜಿಕತೆಯಾಗಿದೆ. ಪುರುಷ ಕೇಂದ್ರವಾಗಿ ಮಹಿಳೆ ಅವನ ಅಧೀನಳಾಗಿರುವ ಸಮಾಜಿಕತೆ ಇದೆ. ಸ್ತ್ರೀ ಪುರುಷರಿಬ್ಬರಿಗೂ ಸಮಾನವಾದ ಸಾಮಾಜಿಕತೆಯು ಸಿಗಬೇಕು. ಆದರೆ ಕುಟುಂಬದಲ್ಲಿ ಹೆಣ್ಣಾದವಳು ಯಾವುದೇ ವಿಷಯಕ್ಕೆ ಸಂಬಂಧಿಸಿದಂತಹ ನಿರ್ಣಯಗಳನ್ನು ತೆಗೆದುಕೊಳ್ಳುವುದು ಕೂಡ ಆಕೆಗೆ ನಿಷಿದ್ಧ. ಇದು ತಲೆತಲಾಂತರಗಳಿಂದಲೂ ಬಂದಿರುವಂತಹ ಪದ್ಧತಿಯಾಗಿರುವುದರಿಂದ ಈ ಪರಿಧಿಯಿಂದ ಹೊರಬರುವುದು ಸಾಧ್ಯವಾಗುತ್ತಿಲ್ಲ. ಸಾಮಾಜಿಕತೆಯಿಂದ ತಪ್ಪಿಸಿಕೊಂಡು, ಇರುವ ಮೌಲ್ಯ ವ್ಯವಸ್ಥೆಗೆ ವಿರುದ್ಧವಾಗಿ ಹೋಗುವುದು ಸಾಧ್ಯವಿಲ್ಲ. ಹೀಗಾಗಿ ಸಾಮಾಜಿಕತೆಯಲ್ಲಿ ಬದಲಾವಣೆಯಾಗದ ಹೊರತು ಮುಸ್ಲಿಂ ಮಹಿಳೆಯರ ಅಭಿವೃದ್ಧಿ ಸಾಧ್ಯವಿಲ್ಲ.

**ಮುಸ್ಲಿಂ ಮಹಿಳೆಯ ಪ್ರಾಕೃತಿಕ ಹೊಣೆ**

ಇಸ್ಲಾಂ ನಿರ್ದೇಶಿಸಿರುವ ಜೀವನ ವ್ಯವಸ್ಥೆಯಲ್ಲಿ ಕುಟುಂಬದ ಪಾಲನೆ, ಪೋಷಣೆ, ಶಿಕ್ಷಣ, ತರಬೇತಿಗಳ ಆರ್ಥಿಕ ಹೊಣೆಯನ್ನು ಕೇವಲ ಪುರುಷನಿಗೆ ವಹಿಸಿಕೊಡಲಾಗಿದೆ. ಏಕೆಂದರೆ ಸ್ತ್ರೀಯ ಮೇಲೆ ಪ್ರಕೃತಿಯು ಅದಕ್ಕಿಂತ ದೊಡ್ಡ ಹೊಣೆಯನ್ನು ವಹಿಸಿಕೊಟ್ಟಿದೆ. ಪುರುಷನು ಒಂದು ಘಳಿಗೆಯ ಮಟ್ಟಿಗೆ ಸ್ತ್ರೀಯ ಜೊತೆ ಸೇರಿ ಶಾಶ್ವತವಾಗಿ ಅವಳಿಂದ ಮತ್ತು ಅವಳ ಜೊತೆ ಸೇರಿದುದರ ಹೊಣೆಗಾರಿಕೆಗಳಿಂದ ಮುಕ್ತನಾಗಬಹುದು. ಆದರೆ ಸ್ತ್ರೀಯನ್ನು ಈ ಭೇಟಿಯ ಪರಿಣಾಮವು ಜೀವನದಾದ್ಯಂತ ಹಿಡಿದಿರಿಸುತ್ತದೆ. ಗರ್ಭಧಾರಣೆಯಿಂದ ಐದು ವರ್ಷಗಳ ತನಕವಂತೂ ಅದರ ಪರಿಣಾಮವು ಆಕೆಯನ್ನು ಬಿಟ್ಟಗಲುವುದೇ ಇಲ್ಲ. ಇದು ಸೃಷ್ಟಿಯ ನಿಯಮ.

ಮಗುವಿನ ಬಗ್ಗೆ ತಾಯಿಗಿರುವಷ್ಟು ಆತ್ಮೀಯತೆ ತಂದೆಗೆ ಇಲ್ಲದಿರುವುದೂ ನಿಸರ್ಗ ನಿಯಮವೇ, ಆದುದರಿಂದ ಈ ಹೊಣೆಯಿಂದ ಸ್ತ್ರೀಯು ಮುಕ್ತಳಾಗುವಂತಿಲ್ಲ. ಈ ಪ್ರಕೃತಿದತ್ತ ಹೊಣೆಯ ಜೊತೆ ಜೀವನದ ಇನ್ನಿತರ ಹೊಣೆಗಳನ್ನು ಆಕೆಯ ಮೇಲೆ ಹೇರುವುದೂ ಮಹಾ ಅನ್ಯಾಯ. ಅನಿವಾರ್ಯವೂ ನಿಸರ್ಗ ಸಹಜವೂ ಆದ ಹೊಣೆಗಳನ್ನು ಮಾತ್ರ ಆಕೆಯ ಮೇಲೆ ಹೇರಬೇಕು. ಪುರುಷನು ತನ್ನ ಹೊಣೆಗಾರಿಕೆಯನ್ನೂ ಆಕೆಯ ಮೇಲೆ ಹೇರಿರುವುದು ಇಂದಿನ ಪುರುಷ ಪ್ರಧಾನ ಸಾಮಾಜಿಕ ವ್ಯವಸ್ಥೆಯ ಪ್ರಮುಖ ದೋಷ.

ಸಂತಾನೋತ್ಪತ್ತಿ ಮತ್ತು ಬೆಳವಣಿಗೆಗೆ ಸ್ತ್ರೀ ಪುರುಷರಿಬ್ಬರೂ ಸಮಾನ ಪಾಲುದಾರರೆಂದ ಮೇಲೆ ಅದರ ಪೋಷಣೆಯ ಹೊಣೆಯನ್ನೂ ಇಬ್ಬರೂ ಸಮಾನವಾಗಿಯೇ ನಿರ್ವಹಿಸಬೇಕಾದದು ನ್ಯಾಯಸಮ್ಮತ. ಪುರುಷನು ಕುಟುಂಬದ ಸಂಪೂರ್ಣ ಆರ್ಥಿಕ ಹೊರೆಯನ್ನು ಹೊರಬೇಕೆಂಬುದು ಈ ಸಮಾನ ಪಾಲುದಾರಿಕೆಯ ಅನಿವಾರ್ಯ ಬೇಡಿಕೆಯಾಗಿದೆ.

**೨.೫.೫. ಮುಸ್ಲಿಂ ಕುಟುಂಬ ವ್ಯವಸ್ಥೆ ಮತ್ತು ಮಹಿಳೆ**

ಮುಸ್ಲಿಂ ಕುಟುಂಬಗಳಲ್ಲಿ ಮಹಿಳೆಯರ ಬದುಕು ಸಮಸ್ಯೆಗಳ ಕೂಪವಾಗಿರುತ್ತದೆ. ಮಹಿಳೆಯರಿಗಿರುವ ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳಲು ಅವಳು ಯಾವ ರೀತಿಯಾದ ಬದುಕು ನಡೆಸುತ್ತಿದ್ದಾಳೆ, ಎಂಬುದನ್ನು ಸಾಮಾಜಿಕ, ಧಾರ್ಮಿಕ ಹಿನ್ನೆಲೆಯಿಂದ ಕಂಡುಕೊಳ್ಳಲಾಗಿದೆ. ಆವಾಗಲೇ ತಿಳಿದು ಬರುವ ಅಂಶವೆಂದರೆ ಅವಳ

ಬದುಕಿನ ಮೇಲೆ ಈ ವ್ಯವಸ್ಥೆಯು ಅಧಿಕಾರ ಸ್ಥಾಪಿಸಿದೆ. ನಿಯಂತ್ರಣವನ್ನು ಸಾಧಿಸಿದೆ. ನಿಯಂತ್ರಿತವಾಗಿರುವ ಬದುಕನ್ನು ಅರಿಯದ ಹೊರತು ಅವಳ ಬದುಕನ್ನು ರೂಪಿಸಲು ಸಾಧ್ಯವಿಲ್ಲ. ಸಾಂಪ್ರದಾಯಿಕ ನೆಲೆಯನ್ನು ಬಿಟ್ಟು ಮೂಲ ನೆಲೆಯಲ್ಲೇ ಹೇಳ ಹೊರಟರೆ ಶೋಷಣೆಯ ಸ್ವರೂಪ ದೊರೆಯುವುದಿಲ್ಲ. ಇದಕ್ಕೆ ಕಾರಣವಾಗಿರುವ ಕುಟುಂಬ, ಸಾಮಾಜಿಕತೆ ಮತ್ತು ಈ ವ್ಯವಸ್ಥೆ ರೂಪಿಸಿರುವಂತಹ ನೀತಿನಿಯಮಗಳನ್ನು ತಿಳಿದುಕೊಳ್ಳಬೇಕಾಗುತ್ತದೆ. ಅಂದಾಗ ಮಾತ್ರ ಮುಸ್ಲಿಂ ಮಹಿಳೆಯ ಬದುಕಿನ ಚಿತ್ರಣ ದೊರೆಯುತ್ತದೆ.

ಕುಟುಂಬ ಸಾಮಾಜಿಕ ವ್ಯವಸ್ಥೆಯ ಒಂದು ಮೂಲ ಘಟಕವಾಗಿದೆ. ಕುಟುಂಬದಲ್ಲಿ ಚಿಕ್ಕ ಮಕ್ಕಳಿಂದ ಹಿಡಿದು ವಯೋವೃದ್ಧರವರೆಗೂ ಎಲ್ಲರೂ ಒಂದೇ ಸೂರಿನಡಿಯಲ್ಲಿ ವಾಸಿಸುತ್ತಿರುತ್ತಾರೆ, ಕುಟುಂಬ ಮಗುವಿನ ಮೊದಲ ಪಾಠಶಾಲೆ, ತಾಯಿಯೇ ಮೊದಲ ಗುರುವಾಗಿದ್ದಾಳೆ, ಕುಟುಂಬವು ಮನೆಯ ಕರ್ತೃ ನೆನಸಿಕೊಂಡಿರುವ ಯಜಮಾನನ ನಿಯಂತ್ರಣದಲ್ಲಿದ್ದು, ಇತರ ಸದಸ್ಯರಿಗೆ, ಆಹಾರ, ಆಶ್ರಯ, ರಕ್ಷಣೆ, ಲೈಂಗಿಕ ಜೀವನಗಳಂಥ ಮೂಲಭೂತ ಅಗತ್ಯಗಳ ಜೊತೆಗೆ ಪರಸ್ಪರ ಸಂಬಂಧ ಹಾಗೂ ಏಕತೆಯ ಭಾವನೆಗಳನ್ನು ಕುಟುಂಬವು ಒದಗಿಸುತ್ತದೆ.

ಸಾಮಾಜಿಕ ನಡವಳಿಕೆ, ಶಿಸ್ತು, ನಿಯಮಪಾಲನೆ ಮುಂತಾದವುಗಳನ್ನು ಕುಟುಂಬ ಸಂಸ್ಥೆಯೇ ರೂಪಿಸುತ್ತದೆ. ಆದ್ದರಿಂದ ವ್ಯಕ್ತಿಯು ಹುಟ್ಟಿನಿಂದ ಸಾವಿನ ತನಕ ಕುಟುಂಬದಲ್ಲಿಯೇ ಇರುತ್ತಾನೆ, ಸಂತಾನೋತ್ಪತ್ತಿ, ಆರ್ಥಿಕ, ಸಾಮಾಜಿಕ ಹಾಗೂ ಭಾವನಾತ್ಮಕ ಭದ್ರತೆಗಳನ್ನೊದಗಿಸುವ ಕುಟುಂಬವು ಸಮಾಜದ ಆಧಾರಸ್ತಂಭವಾಗಿದೆ, ಆಯಾ ಕಾಲದ ಸಂಸ್ಕೃತಿಯನ್ನು ಗಂಡು ಹೆಣ್ಣುಗಳಲ್ಲಿ ಎರಕ ಹೊಯ್ಯುವ ಕುಟುಂಬ ಸಂಸ್ಥೆ ಅವರ ಪಾತ್ರಗಳು, ಜವಾಬ್ದಾರಿಗಳು ಮತ್ತು ಮಾದರಿಗಳನ್ನು ಕಟ್ಟುನಿಟ್ಟಾಗಿ ಪಾಲಿಸುವಂತೆ ರೂಪಿಸಿದೆ.

ಈ ಜವಾಬ್ದಾರಿಗಳನ್ನು ವ್ಯವಸ್ಥಿತವಾಗಿ ನೋಡಿಕೊಂಡು ಹೋಗುವ ಕೆಲಸ ಮಹಿಳೆಯದಾಗಿದೆ. ಮನೆಯ ಇತರ ಸದಸ್ಯರ ಅವಶ್ಯಕತೆಗಳಿಗೆ ಸ್ಪಂದಿಸುವ ತನ್ನ ಪಾತ್ರಗಳನ್ನೇ ಜವಾಬ್ದಾರಿಗಳನ್ನು ಸಮರ್ಥವಾಗಿ ನಿರ್ವಹಿಸಲು ಮಹಿಳೆ ಸದಾ ಸಿದ್ಧವಾಗಿರಬೇಕಾಗುತ್ತದೆ. ಮಹಿಳೆಯನ್ನು ನಿಯಂತ್ರಿಸುವ ನಿಯಂತ್ರಕ ಕುಟುಂಬವೇ ಆಗಿದೆ. ಮಹಿಳೆಗೆ ಗೃಹಿಣಿತ್ವವೇ ಶ್ರೇಷ್ಠವೆಂದು ಹೇಳಿ ಆಕೆ ಮನೆಯ ಹೊರಗೆ ಹೋಗದಂತೆ ಒಂದು ವೇಳೆ ಹೊರ ಪ್ರಪಂಚಕ್ಕೆ ಕಾಲಿಟ್ಟರೆ, ಮನೆ, ಸಮಾಜದ ಕೊಂಕು ನುಡಿಗಳಿಗೆ ಬಲಿಯಾಗಬೇಕಾಗುತ್ತದೆ. ಎಂದು ಹೇಳಿ ಆಕೆ ಬಾಹ್ಯ ಪ್ರಪಂಚಕ್ಕೆ ಬರುವುದನ್ನು ಸಂಪ್ರದಾಯಿಕತೆಯ ಹಿನ್ನಲೆಯಲ್ಲಿ ನಿಷೇಧಿಸಿ, ಮನೆಯ ನಾಲ್ಕು ಗೋಡೆಗಳ ಮಧ್ಯೆ ಬಂದಿಸಲಾಯಿತು.

ಒಬ್ಬ ವ್ಯಕ್ತಿ ಮಹಿಳೆಯಾಗಲಿ, ಪುರುಷನಾಗಲಿ, ಪ್ರಗತಿಯನ್ನು ಹೊಂದಬೇಕಾದರೆ ಮತ್ತು ಪ್ರಗತಿಯು ಕುಂಠಿತಗೊಳ್ಳಬೇಕಾದರೆ ವಿವಾಹವು ಪ್ರಧಾನವಾದ ಪಾತ್ರವನ್ನು ನಿರ್ವಹಿಸುತ್ತವೆ. ಆದರೆ ಈ ಕುಟುಂಬ ಎನ್ನುವ ಸಂಸ್ಥೆ ಪುರುಷನಿಗೆ ನೀಡಿದಷ್ಟು ಪ್ರೋತ್ಸಾಹ ಮಹಿಳೆಗೆ ನೀಡುವುದಿಲ್ಲ. ಶಿಕ್ಷಣವನ್ನು ಪಡೆದುಕೊಳ್ಳುವುದರ ಪುರುಷನ ಹಕ್ಕಾಗಿ ಮಾರ್ಪಾಡಾಗುತ್ತದೆ. ಅದೇ ಶಿಕ್ಷಣ ಮಹಿಳೆಯ ಬಾಧ್ಯತೆಯಾಗಿ ಬಿಡುತ್ತದೆ. ಮಹಿಳೆಯರಿಗಾಗಿಯೇ ಸಾಂಪ್ರದಾಯಿಕ ಅನೌಪಚಾರಿಕವಾದ ಶಿಕ್ಷಣವನ್ನು ನೀಡಲಾಗಿದೆ.

''ಕುಟುಂಬದ ಸದಸ್ಯರೆಲ್ಲರ ಪಾಲಿಗೆ ವಿಶೇಷವಾದ ಹಕ್ಕು, ಬಾಧ್ಯತೆಗಳು ಅಲಿಖಿತವಾಗಿ ಬಂದಿರುತ್ತವೆ. ಪುರುಷ ಪ್ರಧಾನವಾದ ಈ ಸಮಾಜ ವ್ಯವಸ್ಥೆಯಲ್ಲಿ ಈ ಎಲ್ಲ ನಿಯಮಾವಳಿಗಳನ್ನೂ ರೂಪಿಸಿರುವವನು ಪುರುಷನೇ ಎಂದ ಮೇಲೆ, ಸಹಜವಾಗಿಯೇ ಎಲ್ಲವೂ ಅವನ ಮೂಗಿನ ನೇರಕ್ಕೆ ಅವನ ಅನೂಕೂಲಕ್ಕೆ ಸರಿಯಾಗೇ ಇರುತ್ತದೆ. ಹಾಗಾಗಿ ಹಕ್ಕುಗಳೆಲ್ಲ ಪುರುಷನದು ಬಾಧ್ಯತೆಗಳೆಲ್ಲವೂ ಹೆಂಗಸಿನದು ಎಂದಾಗಿ ಬಿಟ್ಟಿದೆ. ಈ ಎಲ್ಲದರ ಮುಖ್ಯ ಸೂತ್ರವಾಗಿ ವಿವಾಹ ಪದ್ಧತಿಯನ್ನು ರೂಪಿಸಲಾಗಿದೆ. ಹೆಂಗಸು ಹುಟ್ಟಿದ ಮನೆಯಲ್ಲಿ ಮಗಳಾಗಿ, ಸೋದರಿಯಾಗಿ, ಬಾಲ್ಯ, ಹರೆಯದ ದಿನಗಳನ್ನು ಕಳೆಯುತ್ತಿರುವಾಗಲೂ ಸೇರುವ ಮನೆಯಲ್ಲಿ ಹೇಗೆ ಬದುಕಬೇಕೆಂಬ ತರಬೇತಿಯಲ್ಲೇ ಬೆಳೆಯುತ್ತಾಳೆ.''

ಪಿತೃಪ್ರಧಾನ ವ್ಯವಸ್ಥೆಯ ಕುಟುಂಬದಲ್ಲಿ ಗಂಡು ಸಂತಾನವನ್ನು ವಂಶಾಭಿವೃದ್ಧಿಯ ಮೂಲವೆಂದು ಪರಿಗಣಿಸುತ್ತಾ ಬಂದಿರುವುದರಿಂದ, ಹೆಣ್ಣು ಮಗುವು ಹುಟ್ಟಿದ ಮನೆ ತಾತ್ಕಾಲಿಕ ತಾಣವೆಂದು ಪರಿಭಾವಿಸಿ ತಾರತಮ್ಯಕ್ಕೆ ಒಳಪಡಿಸಲಾಗಿದೆ. ಈ ತಾರತಮ್ಯವೇ ಮುಂದೆ ಅನೇಕ ಹಂತದ ತಾರತಮ್ಯಗಳಿಗೆ ದಾರಿ ಮಾಡಿಕೊಡುತ್ತದೆ. ಕುಟುಂಬದ ಎಲ್ಲಾ ಸದಸ್ಯರ ಅವಶ್ಯಕತೆಗಳನ್ನು ಪೂರೈಸುವ ಯಜಮಾನ ಪುರುಷನಾದ್ದರಿಂದ ಕುಟುಂಬದ ಎಲ್ಲರ ಮೇಲೆ ತನ್ನ ನಿಯಂತ್ರಣವನ್ನು ಸಾಧಿಸಿದ್ದಾನೆ. ಅದರಂತೆ ಮಹಿಳೆಯನ್ನು ಕೂಡ ತನ್ನ ಹಿಡಿತದಲ್ಲಿರಿಸಿಕೊಂಡು ಬಂದಿದ್ದಾನೆ. ಹೀಗಾಗಿ ಪುರುಷ ಪ್ರಧಾನವಾಗಿ ಮಹಿಳೆ ಅಧೀನಳಾಗಿದ್ದಾಳೆ. ಇನ್ನೂ ದುಡಿಮೆಯ ವಿಷಯಕ್ಕೆ ಬಂದಾಗ ಗಂಡಸು ದುಡಿದು ತಂದು ಹಾಕುವುದರಿಂದ ಅವನ ದುಡಿಮೆ ಉತ್ಪಾದಕವೆನಿಸುತ್ತದೆ ಮತ್ತು ಮೌಲ್ಯವೆನಿಸಿಕೊಳ್ಳುತ್ತದೆ. ಆದರೆ ಮಹಿಳೆಯ ಗೃಹವಾರ್ತೆಯು ಅನುತ್ಪಾದಕವಾಗಿ ಪರಿಗಣಿಸಲಾಗಿದ್ದರಿಂದ ಅವಳ ದುಡಿಮೆಗೆ ಯಾವುದೇ ಮೌಲ್ಯವಿಲ್ಲದೇ ಇರುವುದು ಕೂಡಾ ಅಧೀನತೆಗೆ ಕಾರಣವಾಗಿರುವ ಇನ್ನೊಂದು ಅಂಶವಾಗಿದೆ.

''ಮಹಿಳೆ ಪುರುಷನ ದಾಸ್ಯವನ್ನು ತೊರೆಯುವ ಮೂಲಕವೇ ತನ್ನ ಏಳಿಗೆಗಾಗಿ ವಿಧಿ ವಿಧಾನಗಳನ್ನು ತೊರೆಯುವ ಮೂಲಕವೇ ತನ್ನ ಏಳಿಗೆಗಾಗಿ ವಿಧಿ ವಿಧಾನಗಳನ್ನು ರೂಪಿಸಬಹುದು, ಅಂದರೆ ಮಹಿಳೆ ಕುಟುಂಬ ವ್ಯವಸ್ಥೆಯನ್ನು ಧಿಕ್ಕರಿಸಿ ಸಮಾನತೆಗಾಗಿ ಹೋರಾಡಬೇಕೆಂದಲ್ಲ, ಬದಲಿಗೆ ಮಹಿಳೆ ಕುಟುಂಬ ವ್ಯವಸ್ಥೆಯ ಚೌಕಟ್ಟಿನೊಳಗೆ ಸಮಾನತೆ ಸಾಧಿಸಬೇಕು.''[೨೨]

ನಮ್ಮ ಕುಟುಂಬ ವ್ಯವಸ್ಥೆ ಹಲವು ಕೊರತೆಗಳ ನಡುವೆಯೂ ಜಗತ್ತಿನಲ್ಲೇ ಒಂದು ಅತ್ಯುತ್ತಮ ವ್ಯವಸ್ಥೆ. ಮನಸ್ಸುಗಳನ್ನು ಬೆಸೆಯುವ ಬಾಂಧವ್ಯಗಳಿಗೆ ಹೊಸ ಅರ್ಥ ನೀಡುವ ಅಗತ್ಯವಿದೆ ಅಷ್ಟೇ ಬಂಡಾಯಕ್ಕಿಂತ ಬದಲಾವಣೆ ಮುಖ್ಯ. ಈ ನಿಟ್ಟಿನಲ್ಲಿ ಮಗಳನ್ನು ಬೆಳೆಸುವ ಹೊಣೆಗಾರಿಕೆ ಪಾಲಕರದು. ಮತ್ತೊಂದು ಮನೆ ಬೆಳಗುವ ಜೊತೆಗೆ ತನ್ನದೇ ಸಂಸಾರ ಕಟ್ಟಿಕೊಳ್ಳಲಿರುವ ಅವಳಲ್ಲಿ ದೂರದೃಷ್ಟಿ ಬೇಕು, ಸ್ವಭಾವತಃ ಜವಾಬ್ದಾರಿಗಳನ್ನು ನಗುನಗುತ್ತಲೇ ನಿಭಾಯಿಸುವ ನಾಯಕತ್ವದ ಗುಣ ಹೆಣ್ಣಿಗೆ ಇದೆ. ಸಹನೆಯೂ, ಜೊತೆಗೆ ವಾತ್ಸಲ್ಯವನ್ನು ಧಾರೆ ಎರೆಯಬಲ್ಲ ಪ್ರಕೃತಿ ಶಕ್ತಿ ಆಕೆ, ಸುಪ್ತವಾಗಿರುವ ಆ ಭಾವನೆ ಉದ್ದೀಪಿಸುವ ವಾತಾವರಣ ಮಗಳಿಗೆ ದೊರಕಿಸಿಕೊಟ್ಟಲ್ಲಿ ಆಕೆ ಮತ್ತಷ್ಟು ಪಕ್ವವಾಗಿ, ದಿಟ್ಟೆಯಾಗಿ ಬೆಳೆಯಬಲ್ಲಳು.

ಆದರೆ ಈ ಮೇಲಿನಂತೆ ಹೇಳುವುದು, ಅಂದುಕೊಳ್ಳುವುದು ಸುಲಭವಾದಂತೆ, ನಡೆದುಕೊಳ್ಳುವುದು ಸರಳ ವಿಷಯವಲ್ಲ, ಏಕೆಂದರೆ ಮುಸ್ಲಿಂ ಕುಟುಂಬ ಕಲ್ಪನೆ ಹೆಣ್ಣನ್ನು ಸಮಾನತೆಯ ಸ್ಥಾನದಲ್ಲಿ ನಿಲ್ಲಿಸುವುದಿಲ್ಲ ಎಂಬುದು ವಾಸ್ತವಿಕ ಅಂಶ.

ಹೆಣ್ಣು ಮಕ್ಕಳಲ್ಲಿ ಸಂಸಾರದ ಬಗೆಗಿನ 'ನೆಗೆಟಿವ್' ಭಾವನೆಯನ್ನು ಪುರುಷ ವಿಷಯದಲ್ಲಿ ಎಲ್ಲದಕ್ಕೂ ಜಿದ್ದಿಗೆ ಬೀಳುವ ಬಂಡಾಯವನ್ನು ಮೂಡಿಸುತ್ತಿದೆ. ಇದೊಂದು ಅಪಾಯಕಾರಿ ಲಕ್ಷಣ ಇದಕ್ಕೆ ಯಾವ ಧರ್ಮದ ಮಹಿಳೆಯರು ಹೊರತಾಗಿಲ್ಲ.

ಸ್ತ್ರೀ ಪುರುಷರ ಬಗ್ಗೆ ತಾರತಮ್ಯಗಳು ಸೃಷ್ಟಿಗೊಳಿಸಿದ್ದಾರೆ. ಇದಕ್ಕೆ ಮುಸ್ಲಿಂ ಕುಟುಂಬಗಳು ಹೊರತಾಗಿಲ್ಲ. ಹೆಣ್ಣು ಎಂದಾಕ್ಷಣ ದೇಹಬಲ ಕಡಿಮೆ ದುರ್ಬಲಳು, ನಾಜೂಕು, ಸಹನೆ, ನಾಚಿಕೆ ಸ್ವಭಾವದಳು ಎಂದು ಗಂಡು ಎಂದಾಕ್ಷಣ ದೇಹಬಲ ಜಾಸ್ತಿ, ಶ್ರೇಷ್ಠನು, ಶೌರ್ಯನು, ಸಾಹಸನು ಬುದ್ಧಿವಂತ ಎನ್ನುವ ಸ್ತ್ರೀ ಪುರುಷರ ಗುಣಗಳ ಪಟ್ಟಿಯನ್ನೇ ಬೆಳೆಸುತ್ತಾರೆ. ವಾಸ್ತವದಲ್ಲಿ ಜೈವಿಕತೆಯನ್ನು ಸಾಮಾಜಿಕ ಅಪಕಲ್ಪಿತ ಭಾವನೆಗಳು ಲೆಕ್ಕಕ್ಕೆ ತೆಗೆದುಕೊಳ್ಳುವುದಿಲ್ಲ ಹಾಗಾಗಿ ಇಂದು ತಾರತಮ್ಯ ರಚನೆಗೊಂಡು ಚಿಕ್ಕವರಿರುವಾಗಲೇ ಲಿಂಗ ತಾರತಮ್ಯದ ವ್ಯವಸ್ಥೆಗೆ ತಳ್ಳಿಬಿಡುತ್ತಿದ್ದಾರೆ.

ಸಮಾಜದ ಎಲ್ಲಾ ಕಟ್ಟಳೆಗಳಿಗೆ ಕುಟುಂಬದಿಂದ ನೆರೆ ಹೊರೆಯವರಿಂದ ಪರಸ್ಪರ ನಡೆಯುತ್ತಾ ಕಲೆತು ಅದನ್ನು ಪಾಲಿಸುತ್ತಾ ಅಂತರ್ಗತಿಸಿಕೊಳ್ಳುತ್ತಾ ಸಮಾಜದ ನಿಯಮಗಳನ್ನು ಅನುಸರಿಸಿ ಬದುಕುತ್ತಿದ್ದಾರೆ. ಅದನ್ನು ಕುಟುಂಬದಲ್ಲಿಯೇ ಸಹಜ ದೃಷ್ಟಿಯಿಂದ ಕೊಡುವ ಈ ತರಬೇತಿಯ ಪ್ರಕ್ರಿಯೆಯನ್ನು ನಾವು ಸಾಮಾಜೀಕರಣ ಎನ್ನುತ್ತೇವೆ.

ಸಮಾಜದಲ್ಲಿ ಬೆಳೆಯುವ ಮಾನವ ತನ್ನ ಜೀವನದ ಪ್ರವೃತ್ತಿಗನುಗುಣವಾಗಿ ಸರಿ ತಪ್ಪು ಎಂದು ಭಾವಿಸದೇ ಅಸಮಾನತೆಯ ನಿಟ್ಟಿನಲ್ಲಿ ಇಂದು ನಾವು ಕುಟುಂಬದಲ್ಲಿ ಮಕ್ಕಳನ್ನು ಬೆಳೆಸುತ್ತಿದ್ದದನ್ನು ಕಾಣುತ್ತೇವೆ. ನಿರಂತರವಾಗಿ ಸಾಗುವ ಜೀವನ ಚರಿತ್ರೆಯಲ್ಲಿ ಬೆಳವಣಿಗೆಯ ಹಂತಗಳನ್ನು ವಯಸ್ಸಿಗನುಗುಣವಾಗಿ ತರಬೇತಿಗಳು ಪಡೆದುಕೊಳ್ಳುತ್ತಾ ಬರುತ್ತಿದ್ದಾರೆ. ಎಲ್ಲಾ ಕಟ್ಟಳೆಗಳಿಗೆ ಕುಟುಂಬದಿಂದ ನೆರೆಹೊರೆಯವರಿಂದ ಪರಸ್ಪರ ನಡೆಯುತ್ತಾ ಕಲೆತು ಅದನ್ನು ಪಾಲಿಸುತ್ತಾ ಅಂತರ್ಗತಿಸಿಕೊಳ್ಳುತ್ತಾ ಸಮಾಜದ ನಿಯಮಗಳನ್ನು ಅನುಸರಿಸಿ ಬದುಕುತ್ತಿದ್ದಾರೆ ಅದನ್ನು ಕುಟುಂಬದಲ್ಲಿ ಸಹಜ ದೃಷ್ಟಿಯಿಂದ ಕೊಡುವ ಈ ತರಬೇತಿಯು ಪ್ರತಿ ಕುಟುಂಬಗಳಲ್ಲಿ ನಡೆಯುತ್ತಿದೆ.

ಕ್ಷೇತ್ರಕಾರ್ಯದಲ್ಲಿ ಭೇಟಿಯಾದ ವಕ್ತರೊಬ್ಬರು, ಆಯಿಶಾ ಹೆಸರಿನ ಮಧ್ಯವಸ್ಸಿನವಳಾದ ಈಕೆ ಹೇಳಿದಂತೆ, ತಮ್ಮ ಕುಟುಂಬಗಳಲ್ಲಿ ಹೆಣ್ಣು ಮಕ್ಕಳಿಗೆ ಸಾಂಪ್ರದಾಯಿಕ ಶಿಕ್ಷಣಕ್ಕೆ ಕೊಡುವಷ್ಟು ಪ್ರೋತ್ಸಾಹ, ಸಹಕಾರ ಕನ್ನಡ ಮಾಧ್ಯಮಕ್ಕಿಲ್ಲ. ಧರ್ಮವನ್ನು ಅನುಸರಿಸುವುದಷ್ಟೇ ಸಾಕು. ಜೊತೆಗೆ ಅಲ್ಲಾನು ನಮಗೆ ಬೇಕಾಗುವಷ್ಟು ಬದುಕಲು ಸಾಕೆನಿಸುವಷ್ಟು ಮಾತ್ರ ಸಂಪಾದಿಸಲು ದಾರಿ ತೋರಿಸುತ್ತಾನೆ. ಹೆಚ್ಚಿನದು ಬೇಡ, ಅವನೇ ಎಲ್ಲಾ, ಹೆಚ್ಚು ಕಲಿತು, ಕಲಿಸಿ ನಮ್ಮ ಮಕ್ಕಳನ್ನು ದಾರಿತಪ್ಪಿಸುವ ಹುನ್ನಾರಗಳಿಗೆ ನಾವೇ ಹೇಗೆ ಕಾರಣರಾಗಬೇಕು ? ಕಲಿತು ಕೆಲಸ ತೊಗೊಂಡು ದಿನವಿಡೀ ದುಡಿಯುವ ಹಂಗು ಬೇಡ. ಬದಲಿಗೆ ಗಂಡಸು ನಮ್ಮ ಕುಟುಂಬಕ್ಕೆ

ಬೇಕಾದಷ್ಟು ತಂದು ಹಾಕುತ್ತಾರೆ. ಅವರಿಗೆ ಅವರ ತಂದೆ ತಾಯಿಯರಿಗೆ ಬೇಕಾಗುವಷ್ಟು ಮಕ್ಕಳು ಹೆತ್ತುಕೊಟ್ಟು ಅವರನ್ನು ಖುಷಿಪಡಿಸುವುದು ನಮ್ಮ ಕರ್ತವ್ಯ ಎಂಬ ನಿಲುವು ಹೊಂದಿರುವ ಈ ಮಹಿಳೆ ಇನ್ನು ಸಹ ಆಧುನಿಕ ಜೀವನಕ್ಕೆ ಹೊಂದಿಕೊಳ್ಳದಿರುವುದನ್ನು ಕಂಡುಕೊಳ್ಳಲಾಗಿದೆ.

ಇಂಥ ವ್ಯವಸ್ಥೆಯಲ್ಲಿ ಸ್ತ್ರೀಯನ್ನು ಬೆಳೆಸುವ ಪರಿ ವಿಧಾನ ಮತ್ತು ಕಟ್ಟಳೆಗಳಲ್ಲಿ ವ್ಯತ್ಯಾಸವಿದೆ. ಇದರಿಂದ ವ್ಯವಸ್ಥಿತ ರೂಪದಲ್ಲಿ ಬದುಕಬೇಕಾಗಿದೆ. ಅವರಿಗೆ ತಿಳಿದೋ ತಿಳಿಯದೋ ಪಾಲಿಸಿಕೊಂಡು ಬರುತ್ತಿದ್ದಾರೆ. ಮುಸ್ಲಿಂ ಸಮಾಜವು ತಾನೂ ನಂಬಿದ ಲಿಂಗ ತಾರತಮ್ಯದ ಮೌಲ್ಯಗಳನ್ನು ಉಳಿಸಿ ಬೆಳೆಸುವುದಕ್ಕಾಗಿ ಎಲ್ಲಾ ಹಂತಗಳಲ್ಲೂ ಅತ್ಯಂತ ವ್ಯವಸ್ಥಿತವಾಗಿ ಕೆಲಸ ಮಾಡುತ್ತಿದೆ. ಸಮಾಜದ ಎಲ್ಲಾ ಸಂಸ್ಥೆಗಳು ಅಂದರೆ ವಿವಾಹ, ಕುಟುಂಬ, ಶಿಕ್ಷಣ ಇತ್ಯಾದಿ ಈ ತಾರತಮ್ಯವನ್ನು ಮುಸ್ಲಿಂ ಸಮುದಾಯದ ಮಹಿಳೆಯರಿಂದಲೂ ಬೇರ್ಪಟ್ಟಿಲ್ಲ.

ಲಿಂಗ ವ್ಯತ್ಯಾಸವು ಜೈವಿಕವಾಗಿ ಗಂಡು ಮತ್ತು ಹೆಣ್ಣು ಎಂದು ಗುರ್ತಿಸುತ್ತೇವೆ. ಲಿಂಗ ತಾರತಮ್ಯವು ಮಹಿಳೆ ಮತ್ತು ಪುರುಷ ಭೇಧಗಳ ಸ್ವರೂಪವನ್ನು ಕಾಣುತ್ತೇವೆ. ಸಾಮಾಜಿಕವಾಗಿ ರಚಿಸಲ್ಪಟ್ಟ ಈ ವ್ಯತ್ಯಾಸಗಳು ಜೈವಿಕವಾಗಿ ಪರಿಗಣನೆಗೆ ತೆಗೆದುಕೊಳ್ಳದಿರುವುದನ್ನು ಕಾಣುತ್ತೇವೆ. ಹೆಣ್ಣು ಗಂಡಿನ ಬಗ್ಗೆ ವಿವಿಧ ಕಲ್ಪಿತಗಳು ಸೃಷ್ಟಿಸಿ ಸಾಮಾಜಿಕವಾಗಿ ಒಪ್ಪಿಕೊಳ್ಳುವಂತೆ ತಾರತಮ್ಯಗಳು ವಿವಿಧ ವಲಯಗಳಲ್ಲಿ ರೂಪ ತಾಳಿವೆ.

ಈ ತಾರತಮ್ಯಗಳಿಂದ ಮಹಿಳೆಯನ್ನು ಕಡೆಗಣಿಸಿರುವುದು ಮುಸ್ಲಿಂ ಕುಟುಂಬಗಳಲ್ಲಿಯೂ ಕಾಣುತ್ತೇವೆ. ಪುರುಷ ಚಿಂತನೆಯ ಅಡಿಯಲ್ಲಿ ಮಹಿಳೆಯ ಬದುಕು ಅಸ್ತಿತ್ವವಿಲ್ಲದ ಹುಡುಕಾಟದಂತೆ ಸಾಗುತ್ತಲಿವೆ. ಇದರಿಂದ ಲಿಂಗ ತಾರತಮ್ಯ ವ್ಯತ್ಯಾಸಗಳು ಮಹಿಳೆಯರ ಹಲವಾರು ಶೋಷಣೆಯ ರೂಪದಲ್ಲಿ ವ್ಯತ್ಯಾಸಗಳು ಅನೇಕವಾಗಿವೆ.

''ಶತ ಶತಮಾನಗಳ ಹಿಂದಿನಿಂದಲೂ ಯಾವುದೇ ಜಾತಿ ಭೇಧವಿಲ್ಲದೆ ಪ್ರಪಂಚಾದ್ಯಂತ ಪುರುಷ ಪ್ರಧಾನ ಸಮಾಜವೇ ಎಲ್ಲೆಡೆ ಕಂಡು ಬರುತ್ತದೆ. ಆರಂಭ ಕಾಲದಿಂದಲೂ, ಇಂದಿಗೂ ಪುರುಷನ ಸಹವರ್ತಿನಿಯಾಗಿ ಕೃಷಿ, ಪಶು ಪಾಲನೆ, ಗೃಹಕೃತ್ಯ, ಮಕ್ಕಳ ಪಾಲನೆ ಪೋಷಣೆಯಾದಿಯಾಗಿ ಸಮಸ್ತ ದುಡಿಮೆಗೂ ತೋರಿಕೆಗ ಮಹಿಳೆಯೇ ವಾರಸುದಾರಳೆಂಬಂತೆ ಕಂಡರೂ ಶೋಷಣೆ ಮಾತ್ರ ನಡದೇ ಇದೆ. ಜತೆಗೆ ಭೋಗವಸ್ತುವಿನಂತೆ ತೊಡಗಿಸಿಕೊಂಡ ಪುರುಷ ವರ್ಗ ಅವಳ ವ್ಯಕ್ತಿತ್ವ ವಿಕಾಸಕ್ಕೆ ಎಡೆ ನೀಡದೆ. ಇಂದಿಗೂ ವ್ಯವಸ್ಥೆ ಹಾಗೆಯೇ ಇದೆ. ಗೃಹ ಬಂಧಿನಿಯಾಗಿ ಇರುವ ವ್ಯವಸ್ಥೆಯಲ್ಲಿ ಅಲ್ಪ ಸ್ವಲ್ಪ ಬದಲಾವಣೆ, ಸಡಿಲಿಕೆ ಆಗಿರುವುದು ಕಂಡು ಬಂದರೂ ದಬ್ಬಾಳಿಕೆ, ಹಿಂಸೆ, ಶೋಷಣೆಗಳು ಪ್ರತ್ಯಕ್ಷವಾಗಿಯೂ, ಪರೋಕ್ಷವಾಗಿಯೂ ನಡದೇ ಇದೆ.''[೨೨]

ಮುಸ್ಲಿಂ ಕುಟುಂಬಗಳಲ್ಲಿ ಹೆಣ್ಣು ನಾಲ್ಕು ಗೋಡೆಗಳ ಬಂಧನದಲ್ಲಿರಬೇಕು. ಅವಳು ಸಮಾಜದ ಯಾವುದೇ ಒಂದು ಅಂಗವಾಗಿರಬಾರದು ಸರಪಳಿಯಲ್ಲಿ ಸದಾ ಬಂಧಿಯಾಗಿ ಕಳೆಯಬೇಕು. ಎಂಬುದು ಹಲವರ ವಾದ.

ಇಸ್ಲಾಂ ಧರ್ಮದಲ್ಲಿ ವಂಶವನ್ನು ಮೊದಲು ಮಾತೃಮೂಲದಿಂದ ಗುರ್ತಿಸಲ್ಪಡುತ್ತಿದ್ದರು. ಆದರೆ ಕಾಲ ಕ್ರಮೇಣ ವಂಶಾವಳಿಯನ್ನು ಪಿತೃ ಮೂಲದಿಂದ ಗುರ್ತಿಸಲು ಪ್ರಾರಂಭಿಸಿದರು. ಜೊತೆಗೆ ಆಸ್ತಿಯ ಹಕ್ಕನ್ನು ಸಹ ಗಂಡು ಸಂತಾನಕ್ಕೆ ಸೀಮಿತಗೊಳಿಸಿದರು. ಏಕ ಸಂಗಾತಿಯ ವಿವಾಹವನ್ನು ಸ್ತ್ರೀಯರು ಮಾತ್ರ ಪಾಲಿಸಬೇಕಾಯಿತು. ಆದರೆ ಪುರುಷನಾದವನು ಏಕಕಾಲದಲ್ಲಿ ನಾಲ್ಕು ಜನರೊಡನೆ ವಿವಾಹ

ಮಾಡಿಕೊಳ್ಳಬಹುದಿತ್ತು. ಈ ರೀತಿ ಮುಸ್ಲಿಂ ಕುಟುಂಬದಲ್ಲಿ ಸ್ತ್ರೀಯರಿಗೆ ಉನ್ನತವಾದ ಸ್ಥಾನವನ್ನು ನೀಡದೆ ಅವಳಿಗೆ ಎಲ್ಲಾ ಹಕ್ಕುಗಳಿಂದ ವಂಚಿತರನ್ನಾಗಿ ಮಾಡಿದರು.

ಸ್ತ್ರೀಯರನ್ನು ಕೇವಲ ಭೋಗದ ವಸ್ತುವೆಂದು ತಿಳಿದು ಅವಳನ್ನು ಗುಲಾಮರಂತೆ ನಡೆಸಿಕೊಳ್ಳುತ್ತಿದ್ದರು. ಕುಟುಂಬದಲ್ಲಿ ಅವಳನ್ನು ಎಲ್ಲಾ ಮಾನವೀಯ ಹಕ್ಕುಗಳಿಂದ ವಂಚಿಸಲಾಗಿದೆ. ಅವಳಿಗೆ ಸ್ವತಂತ್ರವಾಗಿ ಜೀವಿಸುವ ಅಧಿಕಾರವು ಇಲ್ಲ. ಎಲ್ಲಾ ರೀತಿಯಿಂದ ಅವಳು ಅನ್ಯಾಯಕ್ಕೆ ಒಳಗಾಗಿದ್ದಾಳೆ. ಗಂಡನ ಮನೆಯಲ್ಲಿ ಅವನ ಕೃಪಾಕಟಾಕ್ಷಕ್ಕೆ ಬೇರು ಬಿದ್ದು ತವರು ಮನೆಯಲ್ಲಿ ತಂದೆ ಮತ್ತು ಸೋದರನ ಕೃಪಾಶೀಲರಾಗಬೇಕಿತ್ತು. ದಾಂಪತ್ಯ ಬಂಧನಕ್ಕೊಳಗಾದ ಬಳಿಕ ಪತಿಯಿಂದ ವಿಮುಕ್ತ ಹೊಂದುವ ಹಕ್ಕು ಸಹ ಅವಳಿಗಿಲ್ಲ. ಸ್ತ್ರೀಯರನ್ನು ಸೇವೆಗಾಗಿ ಸೀಮಿತಗೊಳಿಸಿದ್ದಾರೆ. ಪುರುಷನಿಗೆ ಇಷ್ಟ ಬಂದಂತೆ ವಿವಾಹವಾಗುವುದು ಮತ್ತು ವಿಚ್ಛೇದನೆಯನ್ನು ನೀಡುವ ಅಧಿಕಾರವಿದೆ.

ಮುಸ್ಲಿಂ ಸಮಾಜದಲ್ಲಿ ಮಹಿಳೆಯರನ್ನು ಕುಟುಂಬದ ರಕ್ಷಕಿ, ಪೋಷಕಿ, ಎನ್ನುವ ಔದಾರ್ಯದ ರೀತಿಯಲ್ಲಿ ಅವಳನ್ನು ಶೋಷಣೆ, ಮಾಡುವುದಕ್ಕಾಗಿ ಭಾವುಕತೆ, ಕೋಮಲತೆ, ಪರಾವಲಂಬಿ ಸ್ಥಿತಿ, ಭಯ ಭೀರುತನ, ವಿಧೇಯತೆ, ತ್ಯಾಗ, ಸಂಗೋಪನೆ, ಕ್ಷಮೆ, ಸಹನೆ, ತಾಳ್ಮೆ, ಕಷ್ಟ ಸಹಿಷ್ಣುತೆ ಈ ರೀತಿಯಾಗಿ ಕೇವಲ ಸೇವೆ ಸಲ್ಲಿಸುವಂತಹ ಕೆಲಸ ಕಾರ್ಯಗಳಲ್ಲಿ ಮಾತ್ರ ಅವಳಿಗೆ ಸ್ಥಾನ ನೀಡಿದ್ದಾರೆ.

ಮಹಿಳೆಯರನ್ನು ಗೃಹಕೃತ್ಯಗಳಿಗೆ ಸೀಮಿತಳನ್ನಾಗಿ ಆರ್ಥಿಕತೆಯಿಂದ ದೂರವಿರಿಸುವುದರ ಮೂಲಕವಾಗಿ ಅವಳು ಸಾಮರ್ಥ್ಯ ಹೀನಳು ಅಥವಾ ದುರ್ಬಲಳು ಎಂಬ ಪಟ್ಟಿಯನ್ನು ಅವಳಿಗೆ ಅಂಟಿಸುತ್ತಾರೆ. ಆರ್ಥಿಕವಾಗಿ ದುರ್ಬಲಳಾಗುವಂತೆ ಮಾಡಲಾಗಿ ಆರ್ಥಿಕ ವಹಿವಾಟನ್ನೆಲ್ಲಾ ಅಂದರೆ ಮನೆಯನ್ನು ನಡೆಸುವ ಎಲ್ಲಾ ಪ್ರಮುಖ ಜವಾಬ್ದಾರಿಯನ್ನು ಪುರುಷರೇ ಹೊಂದಿದ್ದಾರೆ. ಆದರೆ ಹೆಣ್ಣು ಗಂಡಿನ ಅಧೀನಳಾಗಿ, ತಾಯಿಯಾಗಿ ಮಕ್ಕಳ ಪೋಷಕಳಾಗಿ ಮಾತ್ರ ಕೆಲಸಗಳನ್ನು ಮಾಡುವಂತಾಗಿದೆ.

ಕುಟುಂಬದ ವ್ಯವಸ್ಥೆಗಳು ಬಹುಪ್ರಧಾನವಾಗಿ ಪಿತೃಪ್ರಧಾನತೆಯಲ್ಲಿಯೇ ಇರುವುದರಿಂದ ಮಾತ್ರ ಪ್ರಧಾನ ಕುಟುಂಬಗಳು ಪಿತೃಪ್ರಧಾನತೆಯಾಗಿ ರೂಪ ತಾಳುತ್ತಿವೆ. ಪಿತೃಪ್ರಧಾನ ಕುಟುಂಬಗಳಲ್ಲಿ ಪುರುಷರೇ ಪ್ರಮುಖ ಸ್ಥಾನವಹಿಸಿಕೊಂಡಿರುವುದು ಸಾಮಾನ್ಯವಾಗಿ ರೂಢಿಯಲ್ಲಿರುವ ವಿಷಯ.

ಮುಸ್ಲಿಂ ಸಮಾಜದ ಅಪಕಲ್ಪನೆಗೆ ಭಾವನೆಗಳು ಸಂಪ್ರದಾಯಿಕ ರೂಢಿ ನಿಯಮಗಳು ಬೇರು ಬಿಟ್ಟಿರುವುದರಿಂದ ಕಠಿಣ ಪಾರಂಪರಿಕ ಕೌಟುಂಬಿಕ ನಿರ್ಬಂಧಗಳು ಸ್ತ್ರೀಯನ್ನು ನಿರ್ಬಂಧನೆಗಳೊಳಗೆ ಉಸಿರುಕಟ್ಟುವಂತಾಗಿದೆ. ಮನೆಗಳಲ್ಲಿ ಪ್ರತಿಯೊಂದು ಸೌಕರ್ಯಗಳಲ್ಲೂ ಸಹ ವರ್ಗೀಕರಣ ನಡೆಯುತ್ತದೆ. ವಿಶೇಷವಾಗಿ ಸಂಪ್ರದಾಯ ಬದ್ಧ ಕುಟುಂಬಗಳನ್ನು ಅವಲೋಕಿಸಿದಾಗ ಸ್ತ್ರೀ ಶಿಕ್ಷಣಕ್ಕೆ ವಿವಿಧ ಸಂಕೋಲೆಗಳು ಬೆಸೆಯುತ್ತಾರೆ ಎಂದು ಕ್ಷೇತ್ರಕಾರ್ಯದಿಂದ ತಿಳಿಯಲಾಗಿದೆ.

ಲಿಂಗ ತಾರತಮ್ಯದ ಪ್ರಕ್ರಿಯೆ ಎಷ್ಟು ಬೆರೆತು ಹೋಗಿವೆ ಎಂದರೆ, ಸಹಜ ಬದುಕು ಸಹ ನಿರ್ವಹಿಸದ ಹಾಗೆ ನಿರೂಪಿಸಿದೆ. ಅಂದರೆ ಪುರುಷನ ಅಧೀನಳಾಗಿ ಬದುಕು ನಿರ್ವಹಿಸಬೇಕು. ಒಂದು ವೇಳೆ ಹಾಗೇನಾದರೂ ತ್ಯಜಿಸಿದರೆ,

ಸಹಜ ಬದುಕಿಗೂ ದಿಕ್ಕು ತಪ್ಪಿಸುವ ಪ್ರಯತ್ನಗಳನ್ನು ಮಾಡುವ ಯೋಚನೆ ಈ ಸಮುದಾಯದ ಪುರುಷರಿಗಿದೆ ಎಂದು ತಿಳಿಯಲಾಗಿದೆ.

ಪುರುಷರಿಗೆ ಬೆಂಬಲವಾಗಿ ನಿಲ್ಲುವ ಪ್ರತಿ ಕುಟುಂಬ ಅವರ ಪ್ರತಿ ಹೆಜ್ಜೆಯು ನಿರೀಕ್ಷಿಸುತ್ತದೆ. ಜೊತೆ ಜೊತೆಗೆ ಪ್ರೇರಣೆ ಸಹಕಾರಗಳು ನೀಡುತ್ತದೆ. ಮಹಿಳೆಯರು ಬದುಕು ನಿರ್ವಹಿಸಲು ಅಸಾಧ್ಯವೆನ್ನುವಷ್ಟರ ಮಟ್ಟಿಗೆ ಉದ್ದೇಶ ಪೂರ್ವಕ ಒತ್ತಡಗಳು, ಸಂಪ್ರದಾಯಗಳು, ಧಾರ್ಮಿಕ ವಿಚಾರಗಳು, ಆಚಾರ ವಿಚಾರಗಳು ಸಹಜ ಮಾದರಿಯಲ್ಲೇ ಕುಟುಂಬದ ವ್ಯಾಪ್ತಿಯೊಳಗೆ ತರಬೇತಿ ಪ್ರಕ್ರಿಯೆ ಜಾರಿಗೊಳ್ಳುತ್ತಲಿವೆ.

ಇದರಿಂದ ಸ್ವತಂತ್ರ, ಸ್ವ ಇಚ್ಚೆಗಳು, ಪುರುಷನಿಗೆ ದೊರಕಿದರೆ, ಮಹಿಳೆಗೆ ಸ್ವ ಇಚ್ಚೆಯ ಆಸೆಗಳು, ಬಯಕೆಗಳಿಗೆ ಕಡಿವಾಣ ಬೀಳುತ್ತದೆ. ಇಂತಹ ಒಂದು ಪ್ರವೃತ್ತಿ ಯಾವ ಧರ್ಮದಲ್ಲಿಯ ಹೆಣ್ಣು ಮಕ್ಕಳಿಗೆ ಗರಿಷ್ಠ ಮಟ್ಟದಲ್ಲಿ ವ್ಯತ್ಯಾಸದಿಂದ ಕೂಡಿಲ್ಲ ಎಂದು ಹೇಳಬಹುದು. ಇದಕ್ಕೆಲ್ಲ ಪೂರಕವಾದ ಕಾರಣ, ಪಿತೃಪ್ರಧಾನ ವ್ಯವಸ್ಥೆ ಇರುವುದರಿಂದ ಈ ಉದ್ದೇಶಗಳು ಅನಿವಾರ್ಯವಾಗಿ ರೂಪ ಪಡೆದುಕೊಳ್ಳುತ್ತವೆ.

ಮುಸ್ಲಿಂ ಕುಟುಂಬಗಳಲ್ಲಿ ನಾವು ನೋಡುವ ಅತಿ ಸರ್ವೇ ಸಾಮಾನ್ಯವಾದ ವಿಷಯವೆಂದರೆ, ಮಹಿಳೆಯನ್ನು ಕೇವಲ ಸಂತಾನೋತ್ಪತ್ತಿಯ ಪ್ರಮುಖ ರುವಾರಿಯೆಂಬುದು ಭಾವನೆಯಾಗಿದೆ. ಸಂತಾನೋತ್ಪತ್ತಿಯ ನಂತರ ಹಲವು ದಿನಗಳವರೆಗೆ ಮಕ್ಕಳನ್ನು ಪೋಷಿಸಿ ಬೆಳೆಸುವ ಭಾರ ಮಹಿಳೆಯದ್ದಾಗಿದ್ದರಿಂದ ಅವಳು ಮನೆಯಲ್ಲಿಯೇ ಇರುವಂತಹ ಸಂದರ್ಭವನ್ನು ಅವಳಿಗೆ ಒದಗಿಸಿಕೊಡಲಾಗಿದೆ.

ಹೆಣ್ಣು ಗಂಡಿನಷ್ಟೇ ಬಲಿಷ್ಠಳು, ಇತರೆ ಕಾರ್ಯಗಳು ಸಮನಾಗಿ ಮಾಡುತ್ತಾಳೆ ಎಂಬುದು ವೈಜ್ಞಾನಿಕವಾಗಿ ಸಾಬೀತಾಗಿದ್ದರೂ ಅವಳ ಪ್ರಾಬಲ್ಯವನ್ನು ಹೆಚ್ಚಿಸುವ ದೃಷ್ಟಿಯಲ್ಲಿ ಅವಳಿಗೆ ಅನಾನುಕೂಲಕರವಾದ ಯಾವುದೇ ರೀತಿಯ ಅವಕಾಶವನ್ನು ಪುರುಷನಿಂದ ಅವಳಿಗೆ ದೊರೆತಿಲ್ಲದಿರುವುದು ಮೇಲ್ನೋಟಕ್ಕೆ ತಿಳಿದು ಬರುವ ವಿಷಯವಾಗಿದೆ. ಆದರೆ ವಸ್ತುಸ್ಥಿತಿ ಮಾತ್ರ ಭಿನ್ನವಾಗಿದ್ದು, ಈ ಭಿನ್ನತೆ ಬೇರಾವ ಮಹಿಳೆಯರಿಗೂ ಹೊರತಾಗಿಲ್ಲ ಎಂಬುದು ಖಚಿತ.

ಗೃಹಕೃತ್ಯಕ್ಕೆ ಸಂಬಂಧಿಸಿದಂತೆ ಹಲವಾರು ಕಾರ್ಯಗಳನ್ನು ಕೈಗೊಳ್ಳುತ್ತಾಳೆ. ಮಕ್ಕಳ ಪೋಷಣೆ, ಅಡುಗೆ ಮಾಡುವುದು, ಸೌದೆ ತರುವುದು, ಗಂಡನ ಸೇವೆ, ಹಿರಿಯರ ಸೇವೆ, ಹೊಲದ ಕೆಲಸ, ಹೈನುಗಾರಿಕೆ, ಮೇವು ತರುವುದು, ಇವೆಲ್ಲಾವನ್ನು ನಿರ್ವಹಿಸುವ ಮಹಿಳೆಯು ಅದಕ್ಕೆ ಪ್ರತಿಫಲವಾಗಿ ಯಾವುದೇ ರೀತಿಯ ನಿರೀಕ್ಷೆಯನ್ನು ಮಾಡದ ಪರಿಸ್ಥಿತಿಯಲ್ಲಿದ್ದಾಳೆ.

ಈ ರೀತಿಯಲ್ಲಿ ಮಹಿಳೆಯರನ್ನು ಗೃಹಕೃತ್ಯಕ್ಕೆ ಸೀಮಿತವಾಗಿ ಮಾಡಿರುವುದು. ಸ್ತ್ರೀ ಪುರುಷರ ತಾರತಮ್ಯಕ್ಕೆ ಕಾರಣವಾಗಿದೆ. ಮುಸ್ಲಿಂ ಮಹಿಳೆಯರನ್ನು ಗೃಹಕೃತ್ಯಗಳಿಗೆ ಸೀಮಿತಳನ್ನಾಗಿ ಆರ್ಥಿಕತೆಯಿಂದ ದೂರವಿರಿಸುವುದರ ಮೂಲಕವಾಗಿ ಅವಳು ಸಾಮರ್ಥ್ಯಹೀನಳು ಅಥವಾ ದುರ್ಬಲಳು ಎಂಬ ಪಟ್ಟಿಯನ್ನು ಅವಳಿಗೆ ಅಂಟಿಸುತ್ತಾರೆ. ಮುಸ್ಲಿಂ ಸಮುದಾಯದ ಕುಟುಂಬಗಳಲ್ಲಿಯೂ ಸಹ ಆರ್ಥಿಕವಾಗಿ ದುರ್ಬಲಳಾಗುವಂತೆ ಮಾಡಲಾಗಿ ಆರ್ಥಿಕ

ವಹಿವಾಟನ್ನೆಲ್ಲಾ ಅಂದರೆ ಮನೆಯನ್ನು ನಡೆಸುವ ಎಲ್ಲಾ ಪ್ರಮುಖ ಜವಾಬ್ದಾರಿಯನ್ನು ಪುರುಷರೇ ಹೊಂದಿದ್ದಾರೆ. ಆದರೆ ಹೆಣ್ಣು ಗಂಡಿನ ಅಧೀನಳಾಗಿ, ತಾಯಿಯಾಗಿ, ಮಕ್ಕಳ ಪೋಷಕಳಾಗಿ ಮಾತ್ರ ಕೆಲಸಗಳನ್ನು ಮಾಡುವಂತಾಗಿದೆ.

ಹೆಚ್ಚಾಗಿ ಬಡತನ ಎಂಬುದು ಮುಸ್ಲಿಂ ಸಮುದಾಯಕ್ಕೆ ಮೊದಲಿನಿಂದಲೂ ಅಂಟಿಕೊಂಡು ಬಂದಂತಿದೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಮೌಲ್ವಿಗಳಾದ (ವಕ್ತೃ) ಮಹಮ್ಮದ್ ಸೈಯದ್ ಅಲಿ ರವರು ಹೇಳಿರುವಂತೆ ನಮ್ಮ ಹೆಣ್ಣು ಮಕ್ಕಳು ಮನೆಯಲ್ಲಿದ್ದುಕೊಂಡೇ ಎಲ್ಲಾ ಕೆಲಸಗಳನ್ನು ಮಾಡಿ, ಆರ್ಥಿಕ ಜವಾಬ್ದಾರಿಗಳಿಗಾಗಿ, ಗಂಡನನ್ನು ತಂದೆಯನ್ನು ಅವಲಂಬಿಸಬೇಕು ಹಾಗೆಯೇ ಅವರಿಗೆ ಅವರ ಮುಂದೆ ಎಂದಿಗೂ ಏರುಸಿರಿನಲ್ಲಿ ಮಾತಾಡದೆ, ಸದಾ ವಿನಯದಿಂದಿರಬೇಕು, ಮನೆಯಲ್ಲಿನ ಗಂಡಸರಿಗೆ ನೆರವಾಗಲು ಬಯಸಿದರೆ ಮನೆಯಲ್ಲಿದ್ದುಕೊಂಡೇ ಯಾವುದಾದರೂ ಕೆಲಸ ಮಾಡಬಹುದು ಎಂದು ಹೇಳುತ್ತಾರೆ. ಮಹಿಳೆಯು ಆರ್ಥಿಕ ಚಟುವಟಿಕೆಗಳನ್ನು ಅಥವಾ ಉದ್ಯೋಗಗಳನ್ನು ಮಾಡಲು ಅಸಮರ್ಥಳು ಎಂದು ಹೇಳಿದಾಗಲೂ ಇಂದಿನ ದಿನದಲ್ಲಿ ಮಹಿಳೆಯು ಸಂಪಾದನೆ ಹೆಚ್ಚು ಇಲ್ಲದಿದ್ದಾಗ, ಬಡತನ ಕಾರಣದಿಂದಾಗಿ ಹೆಣ್ಣು ಕೂಡ ಕೆಲಸಗಳನ್ನು ಮಾಡುವ ಸಂದರ್ಭಗಳನ್ನು ಇಂದು ಕಾಣಬಹುದಾಗಿದೆ.

ಮುಸ್ಲಿಂ ಮಹಿಳೆಯರು ಇಂದು ಸಂಭಾವನೆ ಪಡೆಯುವ ಹತ್ತಾರು ಕೆಲಸಗಳನ್ನು ಮಾಡುತ್ತಿದ್ದಾಳೆ. ಅವುಗಳೆಂದರೆ, ಮನೆಕಟ್ಟಲು ಸಹಾಯಕಳಾಗಿ, ಬಿತ್ತನೆ ಕೆಲಸ, ಕೊಯ್ಲಿಯ ಕೆಲಸ, ಬೀಡಿ ಕಟ್ಟುವುದು, ಹಪ್ಪಳ ತಯಾರಿಕೆ, ಇನ್ನಿತರವಾಗಿ ಮಹಿಳೆಯರು ತೆಗೆದುಕೊಳ್ಳುವ ಆದಾಯವಾದರೂ ಅದು ಅತ್ಯಲ್ಪ ಪ್ರಮಾಣದ್ದಾಗಿರುತ್ತದೆ.

ದೀರ್ಘಾವಧಿಯ ಕೆಲಸಕ್ಕೆ ಇಂದು ಮುಸ್ಲಿಂ ಮಹಿಳೆಯರು ಕೆಲಸ ಮಾಡುತ್ತಿದ್ದರೂ, ಕೆಲವು ಮೂಲಭೂತ ಸೌಕರ್ಯಗಳಿಗಾಗಿ ಇತರ ಮಹಿಳೆಯರಿಗಿಂತಲೂ ಹಿಂದುಳಿದಿದ್ದಾರೆ ಎನ್ನಲಾಗಿದೆ. ಇಂತಹ ಸಂದರ್ಭದಲ್ಲಿ ಹೆಣ್ಣು ಮಕ್ಕಳನ್ನು ಕೇವಲ ಸಾಂಪ್ರದಾಯಿಕ ಶಿಕ್ಷಣಕ್ಕೆ ಮಾತ್ರ ಸೀಮಿತವಾಗಿರುವ ಪ್ರಯತ್ನಗಳು ಕುಟುಂಬದೊಳಗೆ ನಡೆಯುತ್ತಿವೆ.

ಇಂದು ಪ್ರತಿ ಮಹಿಳೆಯರ ಕಾರ್ಯಕ್ಷೇತ್ರಗಳು ವಿಸ್ತಾರವಾಗಿ ಕಷ್ಟ ಕೋಟಲೆಗಳಿಂದ ತುಂಬಿಕೊಂಡಿವೆ ಎಂದು ಬಹಳಷ್ಟು ಪುರುಷರಿಗೆ ತಿಳಿಯದೆ ಇರುವುದು ದುರದೃಷ್ಟಕರ. ಹಾಗೆ ಮಹಿಳೆಯು ತಮ್ಮ ಕಾರ್ಯಕ್ಷೇತ್ರದ ಬಗ್ಗೆ ಜಿಗುಪ್ಸೆ, ಬೇಸರಗಳು ಇದ್ದರೂ ವಿವಿಧ ವಲಯಗಳಲ್ಲಿ ಇದನ್ನು ಗುರ್ತಿಸಿ ಅನಿವಾರ್ಯವಾಗಿ ಎದುರುತ್ತರ ನೀಡುವ ಹಾಗಿಲ್ಲ. ನೀಡಿದರೆ ಬದುಕು ಕಷ್ಟಕರವಾಗಿ ತನ್ನ ಅಸ್ತಿತ್ವಕ್ಕಾದರೂ ಸ್ವಾತಂತ್ರ್ಯವನ್ನು, ಆಸೆ ಆಕಾಂಕ್ಷೆಯನ್ನು ಬದಿಗೊತ್ತಿ ಬದುಕುತ್ತಿದ್ದಾಳೆ ಇಂದು ಮಹಿಳೆ ಎನ್ನುವುದು ಸತ್ಯ.

ಹಾಗೆ ನೋಡಿದರೆ ಉನ್ನತ ವರ್ಗದ ಮುಸ್ಲಿಂ ಮಹಿಳೆಯರಿಗೂ, ಕೆಳವರ್ಗದ ಮುಸ್ಲಿಂ ಮಹಿಳೆಯರಿಗೂ ಬೇರೆ ಬೇರೆ ಪ್ರಮಾಣದ ವ್ಯತ್ಯಾಸಗಳು ಇವೆ. ಮಹಿಳೆಗೆ ಉನ್ನತ ವರ್ಗದಲ್ಲಿ ಅಧಿಕಾರ ಜವಾಬ್ದಾರಿ ಹುದ್ದೆಯು ಇದ್ದರೂ ಸಹ ಅದಕ್ಕೆ ತದ್ವಿರುದ್ಧ ವಿಚಾರಗಳೇ ಪುರುಷರ ಒಳ ಮನಸ್ಸಿನಲ್ಲಿ ಒಳಮೂಡಿವೆ. ಮನೆಕೆಲಸ, ಹೊರಗಿನ ಕೆಲಸ ಇಬ್ಬಗೆಯಾಗಿಯೂ ನಿರ್ವಹಿಸಬೇಕಾಗಿರುವ ಹಂತಗಳು ಮಹಿಳೆಗೆ ಮಾತ್ರ ಮೀಸಲು

ಮಾಡಿರುವುದು ಕಾಣುತ್ತೇವೆ. ಇಲ್ಲಿ ಪುರುಷ ಉದ್ಯೋಗದಲ್ಲಿದ್ದರೆ, ಅಥವಾ ಇಲ್ಲದಿದ್ದರೆ, ಅವನು ಮಹಿಳೆಗೆ ಹಣೆಪಟ್ಟಿ ಹಚ್ಚಿರುವ ಮನೆಕೆಲಸದಲ್ಲಿ ನಿರುತ್ಸಾಹ, ಸಂಕೋಚ, ತಾತ್ಸರ ಒಳಮೂಡಿರುವುದರಿಂದ ಪುರುಷನು ಮನೆಕೆಲಸದಲ್ಲಿ ನಿರಾಕರಣೆ ಮಾಡುತ್ತಾನೆ. ದ್ವಿಮುಖ ಪಾತ್ರದಲ್ಲಿ ಮಹಿಳೆ ಮಾತ್ರ ದುಡಿಯಬೇಕಾದದ್ದು ಉನ್ನತ ವರ್ಗದಲ್ಲಿಯೂ ಸಹ ಇದೆ ಎಂದು ಹೇಳಲಾಗಿದೆ.

ಇದಕ್ಕೆ ಸಾಕ್ಷಿಯಾಗಿ ಹೊಸಪೇಟೆ ಚಪ್ಪರದಹಳ್ಳಿ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಎಸ್.ಆರ್ ನಗರದ ಮುಸ್ಲಿಂ ಮಹಿಳೆಯೋರ್ವಳು, ಆರ್ಥಿಕವಾಗಿ ಉತ್ತಮ ಸ್ಥಿತಿಯಲ್ಲಿದ್ದರೂ ಸಹ ಹೊರಗಡೆ ಉದ್ಯೋಗವನ್ನು ನಿರ್ವಹಿಸುತ್ತಿದ್ದು, ಮನೆಯಲ್ಲಿ ತನ್ನ ಎಳೆಯ ಹಾಲು ಕುಡಿಯುವ ಮಗುವನ್ನು ಮನೆಯಲ್ಲೇ ಬಿಟ್ಟು ದುಡಿದು ಬಂದು, ಮನೆಯ ಇತರ ಸಮಸ್ತ ಜವಾಬ್ದಾರಿಯನ್ನು ನೋಡಿಕೊಳ್ಳಬೇಕಾಗಿದೆ.

## ಟಿಪ್ಪಣಿಗಳು

೧. ಛಾಯಾ ಧಾತಾರ್, ಸ್ತ್ರೀ ಪುರುಷ (ಮೂಲ) ಸರಸ್ವತಿ (ಕ) ಇಳಾ ಪ್ರಕಾಶನ, ಬೆಂಗಳೂರು, ಎಫ್.ಐ. ೧೯೯೨

೨. ಕೆ. ಷರೀಫಾ, ಬಂಡಾಯ; ಮುಸ್ಲಿಂ ಸಂವೇದನೆ, ಸಿ.ವಿ.ಜಿ ಪ್ರಕಾಶನ, ಬೆಂಗಳೂರು, ೨೦೦೪, ಪು.ಸಂ ೭

೩. ಡಾ. ಶಾಂತಾ ಇಮ್ರಾಪುರ, ಧರ್ಮ, ಮಹಿಳೆ ಮತ್ತು ಸಮಾಜ (ಧರ್ಮ ಮತ್ತು ಮಹಿಳೆ) ಚೇತನ ಪ್ರಕಾಶನ, ಧಾರವಾಡ, ೨೦೦೧, ಪು.ಸಂ. ೫,೬.

೪. ಕೆ. ಷರೀಫಾ, ಬಂಡಾಯ; ಮುಸ್ಲಿಂ ಸಂವೇದನೆ, (ಧರ್ಮ ಮತ್ತು ಮಹಿಳೆ) ಸಿ.ವಿ.ಜಿ ಪ್ರಕಾಶನ, ಬೆಂಗಳೂರು, ೨೦೦೪, ಪು.ಸಂ. ೭೦

೫. ಮಹಮ್ಮದ್ ಕುಳಾಯಿ, ಬಿ.ಎಸ್. ಶರ್ಫುದ್ದಿನ್ ಅಕ್ಬರ್ ಅಲಿ, ಶಿಕ್ಷಣ ಮತ್ತು ಮುಸ್ಲಿಂರ (ಮುಸ್ಲಿಂರ ಶೈಕ್ಷಣಿಕ ಸ್ಥಿತಿಗತಿ) ಮುಸ್ಲಿಂ ಲೇಖಕರ ಸಂಘ, ಮಂಗಳೂರು ಪ್ರಕಾಶನ, ೧೯೯೧, ಪು.ಸಂ. ೫೪

೬. ಮಹಮ್ಮದ್ ಕುಳಾಯಿ, ಬಿ.ಎಸ್. ಶರ್ಫುದ್ದಿನ್ ಅಕ್ಬರ್ ಅಲಿ, ಶಿಕ್ಷಣ ಮತ್ತು ಮುಸ್ಲಿಂರ (ಮುಸ್ಲಿಂರ ಶೈಕ್ಷಣಿಕ ಸ್ಥಿತಿಗತಿ) ಮುಸ್ಲಿಂ ಲೇಖಕರ ಸಂಘ ಮಂಗಳೂರು ಪ್ರಕಾಶನ, ೧೯೯೧, ಪು.ಸಂ. ೯೬೭.

೭. ಇಬ್ರಾಹಿಂ ಸಈದ್, ತಪ್ಪು ಕಲ್ಪನೆಗಳು (ಸ್ತ್ರೀ ಶಿಕ್ಷಣ ಮತ್ತು ಇತರ ಹಕ್ಕುಗಳು) ಶಾಂತಿ ಪ್ರಕಾಶನ, ಮಂಗಳೂರು, ೧೯೯೩, ಪು.ಸಂ. ೬೦

೮. ಮಹ್ಮದ್ ಕುಳಾಯಿ, ಬಿ.ಎಸ್ ಶರ್ಫುದ್ದೀನ್ ಅಕ್ಬರ್ ಅಲಿ, (ಶಿಕ್ಷಣ ಮತ್ತು ಮುಸ್ಲಿಂರು) ಮುಸ್ಲಿಂ ಲೇಖಕರ ಸಂಘ, ಮಂಗಳೂರು ಪ್ರಕಾಶನ ೧೯೯೧, ಪು.ಸಂ. ೯೬.

೯. ಕೆ. ಷರೀಫಾ, ಬಂಡಾಯ; ಮುಸ್ಲಿಂ ಸಂವೇದನೆ, (ಮುಸ್ಲಿಂ ಮಹಿಳೆಯ ಪಾತ್ರ ಬದಲಾಗುತ್ತಿದೆಯೇ?) ಸಿ.ವಿ.ಜಿ ಪ್ರಕಾಶನ, ಬೆಂಗಳೂರು, ೨೦೦೪, ಪು.ಸಂ. ೭೬

೧೦. ಡಾ ಕೆ.ಎಸ್. ರತ್ನಮ್ಮ, ಸ್ತ್ರೀಲೇಖ (ಮಹಿಳೆ ಕಾನೂನು-ಜಾಗೃತಿ) ಶ್ರೀಕ್ಷೇತ್ರ ಪಬ್ಲಿಕೇಶನ್ಸ್, ಮೈಸೂರು, ೨೦೦೫ ಪು.ಸಂ ೧೮೦.

೧೧. ಡಾ ಕೆ.ಎಸ್. ರತ್ನಮ್ಮ, ಸ್ತ್ರೀಲೇಖ (ಮಹಿಳೆ ಕಾನೂನು-ಜಾಗೃತಿ), ಶ್ರೀಕ್ಷೇತ್ರ ಪಬ್ಲಿಕೇಶನ್, ಮೈಸೂರು, ೨೦೦೫ ಪು.ಸಂ. ೫೮.

೧೨. ಕೆ. ಷರೀಫಾ, ಬಂಡಾಯ; ಮುಸ್ಲಿಂ ಸಂವೇದನೆ, (ಮುಸ್ಲಿಂ ಹೆಣ್ಣು; ಸಂದಿಗ್ಧಗಳ ಸುಳಿಯಲ್ಲಿ) ಸಿ.ವಿ.ಜಿ ಪ್ರಕಾಶನ, ಬೆಂಗಳೂರು, ೨೦೦೪, ಪು.ಸಂ. ೪೭

೧೩. ಕೆ. ಷರೀಫಾ, ಬಂಡಾಯ; ಮುಸ್ಲಿಂ ಸಂವೇದನೆ, ಮುಸ್ಲಿಂ ಹೆಣ್ಣು ಸಂದಿಗ್ಧಗಳ ಸುಳಿಯಲ್ಲಿ) ಸಿ.ವಿ.ಜಿ ಪ್ರಕಾಶನ, ಬೆಂಗಳೂರು, ೨೦೦೪, ಪು.ಸಂ. ೪೭

೧೪. ಕೆ. ರಾಮ್, ಇಸ್ಲಾಂ ಧರ್ಮ ಮಹಿಳೆ (ಅಪ್ರಕಟಿತ ಸಂಪ್ರಬಂಧ) ಮಹಿಳಾ ಅಧ್ಯಯನ ವಿಭಾಗ ಕನ್ನಡ ವಿಶ್ವವಿದ್ಯಾಲಯ, ಹಂಪಿ. ವಿದ್ಯಾರಣ್ಯ ೨೦೦೫, ಪ್ರ.ಸಂ. ೨೪.

೧೫. ಎಂ.ಎಸ್. ಇಸ್ಲಾಹಿ "ಕುರ್ ಆನ್" ವ್ಯಾಖ್ಯಾನ, ಶಾಂತಿ ಪ್ರಕಾಶನ ಮಂಗಳೂರು, ೨೦೦೩, ಪು.ಸಂ. ೩೩, ೩೨.

೧೬. ಇಬ್ರಾಹಿಂ ಸಈದ್, "ಮುಸುಕಿನಲ್ಲಿ ಮುಸ್ಲಿಂ ಮಹಿಳೆ" ಶಾಂತಿ ಪ್ರಕಾಶನ ಮಂಗಳೂರು, ೧೯೯೭ ಪು.ಸಂ. ೪೮

೧೭. ಕೆ. ಷರೀಫಾ, ಬಂಡಾಯ; ಮುಸ್ಲಿಂ ಸಂವೇದನೆ, (ಮುಸ್ಲಿಂ ಹೆಣ್ಣು; ಸಂದಿಗ್ಧಗಳ ಸುಳಿಯಲ್ಲಿ) ಸಿ.ವಿ.ಜಿ.ಪ್ರಕಾಶನ, ಬೆಂಗಳೂರು, ೨೦೦೪, ಪು.ಸಂ. ೪೪,೪೫.

೧೮. ಡಾ. ಶಾಂತಾ ಇಮ್ರಾಪುರ, ಧರ್ಮ ಮಹಿಳೆ ಮತ್ತು ಸಮಾಜ (ಧರ್ಮ ಮತ್ತು ಮಹಿಳೆ) ಚೇತನಾ ಪ್ರಕಾಶನ ಧಾರವಾಡ, ೨೦೦೧, ಪು.ಸಂ. ೯.

೧೯. ಕೆ. ಷರೀಫಾ, ಬಂಡಾಯ; ಮುಸ್ಲಿಂ ಸಂವೇದನೆ, (ಮುಸ್ಲಿಂ ಮಹಿಳೆಯರ ಪಾತ್ರ ಬದಲಾಗುತ್ತಿದೆಯೇ) ಸಿ.ವಿ.ಜಿ. ಪ್ರಕಾಶನ, ಬೆಂಗಳೂರು, ೨೦೦೪, ಪು.ಸಂ. ೪೪,೪೫.

೨೦. ಕೆ. ರಾಮ್, ಇಸ್ಲಾಂ ಧರ್ಮ: ಮಹಿಳೆ (ಅಪ್ರಕಟಿತ ಸಂಪ್ರಬಂಧ) ಮಹಿಳಾ ಅಧ್ಯಯನ ವಿಭಾಗ ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ, ೨೦೦೫ ಪು.ಸಂ. ೩೩.

೨೧. ಇಂದಿರಾ ಕೃಷ್ಣಪ್ಪ, ನಮ್ಮ ಮಗಳು ನಮ್ಮ ಶಕ್ತಿ, ಬಿ.ಕೆ. ಪಬ್ಲಿಕೇಷನ್ಸ್ ಬೆಂಗಳೂರು ೨೦೦೪, ಪುಸಂ. ೩೬, ೩೮.

೨೨. ಡಾ ಕೆ.ಎಸ್. ರತ್ನಮ್ಮ ಸ್ತ್ರೀಲೇಖ (ಪ್ರಸ್ತುತ ಸಮಾಜದಲ್ಲಿ ಮಹಿಳೆ) ಶ್ರೀಕ್ಷೇತ್ರ ಪಬ್ಲಿಕೇಷನ್ಸ್, ಮೈಸೂರು, ೨೦೦೫, ಪು.ಸಂ. ೨೨೫.

೨೩. ಡಾ. ಜ್ಯೋತಿ ಶಶಿಕುಮಾರ್, (ಮಹಿಳಾ ಸಾಮಾಜಿಕತೆ) ಮಹಿಳಾ ಅಧ್ಯಯನ ಕೇಂದ್ರ ೨೦೦೭ ಕನ್ನಡ ವಿಶ್ವವಿದ್ಯಾಲಯ, ಹಂಪಿ ಪು.ಸಂ.೨೭.

* * *

## ಅಧ್ಯಾಯ : ಮೂರು

# ಮುಸ್ಲಿಂ ಮಹಿಳೆಯ ಧಾರ್ಮಿಕ ಆಚರಣೆಗಳು

೩.೧. ಸಾಂಸ್ಕೃತಿಕ ಹಿನ್ನೆಲೆ

೩.೨. ಮುಸ್ಲಿಂ ಮಹಿಳೆಯ ಪರದಾ ಪದ್ಧತಿ

೩.೩. ಮುಸ್ಲಿಂ ಮಹಿಳೆಯ ಪ್ರಾಕೃತಿಕ ಹೊಣೆ

೩.೪. ವಸ್ತ್ರಧಾರಣೆಯ ನಿಯಮಗಳು

೩.೫. ನಂಬಿಕೆಗಳು

೩.೬. ಮುಸ್ಲಿಂ ಮಹಿಳಾ ಸಂಪ್ರದಾಯಗಳು

೩.೭. ಸಂಸ್ಕಾರಗಳು

೩.೮. ಸಾಂಪ್ರದಾಯಿಕ ಗೃಹಿಣಿತ್ವ

## ಅಧ್ಯಾಯ : ಮೂರು

## ಮುಸ್ಲಿಂ ಮಹಿಳೆಯ ಧಾರ್ಮಿಕ ಆಚರಣೆಗಳು

### ೩.೧. ಸಾಂಸ್ಕೃತಿಕ ಹಿನ್ನೆಲೆ

ಸಾಮಾಜಿಕ, ಧಾರ್ಮಿಕ, ಆರ್ಥಿಕ ಪುರುಷ ನಿಷ್ಠ ಚಿಂತನೆಗಳು ಹೆಣ್ಣಿನ ವ್ಯಕ್ತಿತ್ವ ನೇತಾತ್ಮಕವಾಗಿಯೇ ವ್ಯಾಖ್ಯಾನಿಸಿದ ರೀತಿ ಅವಾಸ್ತವವಾಗಿವೆ. ಯಾವುದೇ ಧರ್ಮವು ಬುದ್ಧಿಜೀವಿಗಳಿಂದ ಮತ್ತು ಸಾರ್ವಜನಿಕ ಹಿತಾಸಕ್ತಿ ಪಡೆದಿದ್ದ ಕೆಲವೊಂದು ಹಿರಿಯರಿಂದ ಸ್ಥಾಪಿಸಲ್ಪಟ್ಟು ಅಸ್ತಿತ್ವ ಪಡೆದಿದೆ. ಹೀಗೆ ಅಸ್ತಿತ್ವಕ್ಕೆ ಬಂದ ಧರ್ಮ ದೈವಾನು ಸಂಭೂತರಿಂದ ಸ್ಥಾಪಿಸಲ್ಪಟ್ಟಿದೆ ಎನ್ನುವ ಭೌತಿಕ ದೃಷ್ಟಿಕೋನವನ್ನು ನೀಡಲಾಗಿದೆ. ಇಂತಹ ಧರ್ಮಗಳ ಬಗೆಗೆ ಅನೇಕ ಬಗೆಯ ಸಾಮಾಜಿಕ ಗ್ರಹಿಕೆಗಳಿವೆ.

ಧರ್ಮ ಎಂಬುದು ಪ್ರಶ್ನಾತೀತವಾದ ಪವಿತ್ರಲೋಕ, ಅದು ಎಲ್ಲಾ ಕಾಲದಲ್ಲೂ ಮಾನವ ಸಮಾಜಕ್ಕೆ ಮಾರ್ಗದರ್ಶಕವಾಗಿ ಕೆಲಸ ಮಾಡುತ್ತಿರುತ್ತದೆ. ಅದನ್ನ ರಕ್ಷಿಸಿ ಪಾಲಿಸುವುದು ಜನರ ಕರ್ತವ್ಯ. ಎಂಬ ಗ್ರಹಿಕೆ ಜನಪ್ರಿಯವಾಗಿದ್ದು ಅದಕ್ಕೆ ಸಾಮಾಜಿಕ ಮಾನ್ಯತೆ ಇದೆ. ಸಾಮಾನ್ಯವಾಗಿ ಧರ್ಮದ ಸಂಸ್ಥಾಪಕರು ಪುರುಷರೇ ಆಗಿದ್ದರಿಂದ ಧರ್ಮದ ನಿರ್ವಚನಗಳು ಧಾರ್ಮಿಕ ಕಾನೂನುಗಳು ಇವುಗಳೆಲ್ಲ ಪುರುಷರ ಹಿತಾಸಕ್ತಿಯನ್ನೇ ಕಾಪಾಡುತ್ತಿರುತ್ತವೆ. ಮಹಿಳಾ ವಿರೋಧಿಯಾದ ಅನೇಕ ಸಂಗತಿಗಳು ಧರ್ಮದ ಹೆಸರಿನಲ್ಲಿ ವೈಭವಿಕರಿಸಲ್ಪಡುತ್ತವೆ.

ಮುಸ್ಲಿಂ ಧರ್ಮದ ಸಂಸ್ಥಾಪಕರಾದ ಮಹ್ಮದ್ ಪೈಗಂಬರ್‌ರವರು ಹುಟ್ಟು ಹಾಕಿದ ಇಸ್ಲಾಂ ಧರ್ಮ ಭಾರಿ ಜನ ಮಾನ್ಯತೆ ಪಡೆಯಿತು. ಇವರ ನಂತರ ಬಂದಂತಹ ಇವರ ಅನುಯಾಯಿಗಳು ಅಲ್ಲಾನ ಸಂದೇಶಗಳು ಎನ್ನುವ ರೀತಿಯಲ್ಲಿ ಕುರಾನ್ ರಚಿಸಿದರು. ಮಹ್ಮದ್‌ರು ಮಹಿಳೆಯ ಕುರಿತು ಯಾವ ನಿಯಮಗಳನ್ನು ಹೊಂದಿದ್ದರು. ಅವಳನ್ನು ಕುರಿತು ಏನನ್ನು ಮಾತನಾಡಿದರು ಎನ್ನುವುದಕ್ಕೆ ಹೆಚ್ಚಿನ ಸಾಕ್ಷ್ಯಾಧಾರಗಳಿಲ್ಲ. ಇಸ್ಲಾಂ ಧರ್ಮದಲ್ಲಿರುವ ಪುರುಷ ಪ್ರಧಾನ ವ್ಯವಸ್ಥೆಯ ರಾಜಕೀಯ ಭಾಗವಾಗಿ ಬಂದಂತಹ ಕುರಾನ್‌ನಲ್ಲಿಯ ಲಿಖಿತ ಹೇಳಿಕೆಗಳನ್ನು ಗಮನಿಸುವುದು ಅನಿವಾರ್ಯವಾಗಿದೆ.

ಅಂದರೆ ಸಾಮಾನ್ಯವಾಗಿ ಧರ್ಮದಲ್ಲಿ ಉಲ್ಲೇಖಿತವಾದ ಸಂಗತಿಗಳು ಎತ್ತಿಹಿಡಿಯುವಂತಹ ಬೆಂಬಲಿಸುವಂತಹವು ಆಗಿರುತ್ತದೆ. ಅಥವಾ ಅವುಗಳನ್ನು ಧಾರ್ಮಿಕ ಸಂಗತಿಗಳನ್ನು ಧಾರಣೆಯ ರೂಪದಲ್ಲಿ ಮುನ್ನಡೆಯುವಂತಹವು ಆಗಿರುತ್ತವೆ. ಧರ್ಮದಲ್ಲಿ ಏನೇನು ಹೇಳಿವೆಯೋ ಅದನ್ನು ಎತ್ತಿ ಹಿಡಿಯುವುದು ರಕ್ಷಿಸುವುದು ಆಯಾ ಧರ್ಮಗಳ ಅನುಯಾಯಿಗಳ ಕರ್ತವ್ಯವಾಗಿರುತ್ತವೆ.

ಸಂಸ್ಕೃತದಲ್ಲಿ ಧರ್ಮಶಬ್ದಕ್ಕೆ ಅನೇಕ ಅರ್ಥಗಳಿವೆ.

೧. ಮತ ಧರ್ಮ - ಸಾಂಪ್ರದಾಯಿಕ ಮತಾಚರಣೆಗಳು.

೨. ಕಾನೂನು - ರೂಢಿ ರೂಢಿಯ ಆಚರಣೆ, ಪದ್ಧತಿ ನಿಬಂಧನೆ.

೩. ಧಾರ್ಮಿಕ ಅಥವಾ ನೈತಿಕ ಪುಣ್ಯ - ಸದ್ಗುಣ, ಋಜತೆ.

೪. ಕರ್ತವ್ಯ - ನಿಯಮಿತವಾದ ಕಾರ್ಯಶೀಲತೆ.

೫. ಋಜುತ್ವ - ನ್ಯಾಯಧರ್ಮ ಶ್ರದ್ಧೆ, ಯುಕ್ತತೆ, ಸರ್ವಸಮತೆ, ಸಮದೃಷ್ಟಿ.

೬. ಶಿಷ್ಟಾಚಾರ - ನೈತಿಕತೆ

೭. ಸ್ವರೂಪ - ಸಚ್ಚಾರಿತ್ರ್ಯ, ಮೂಲಭೂತ ಲಕ್ಷಣ, ಗುಣ.

ಮಹಿಳೆಯ ಸ್ಥಾನ-ಮಾನಗಳು ಯಥವತ್ತಾಗಿ ಸಾಮಾಜಿಕ ಜೀವನದಲ್ಲಿ ಮುಂದುವರೆದಿಯೋ ಅಥವಾ ಭಿನ್ನವಾಗಿವೆಯೇ ಎನ್ನುವುದನ್ನು ತಿಳಿದುಕೊಳ್ಳಲಾಗಿದೆ. ಮುಸ್ಲಿಂ ಮಹಿಳೆಯ ಸ್ಥಿತಿ-ಗತಿಗಳನ್ನು ಅರ್ಥಮಾಡಿಕೊಳ್ಳುವದಕ್ಕಾಗಿ ಕ್ಷೇತ್ರಕಾರ್ಯ ಕೈಗೊಂಡಿದ್ದೇನೆ. ಈ ಕ್ಷೇತ್ರಕಾರ್ಯವನ್ನು ಹೊಸಪೇಟೆಯ ಆಯ್ದ ಮುಸ್ಲಿಂ ನಗರಗಳು, ಮಸೀದಿಗಳು ಹಾಗೂ ಧಾರ್ಮಿಕ ಮುಖಂಡರುಗಳ ಜೊತೆ ಚರ್ಚಿಸಿ ತಿಳಿದುಕೊಳ್ಳಲಾಗಿದೆ. ಕುರಾನ್‌ನಲ್ಲಿಯ ಮಹಿಳೆಯ ಸಾಮಾಜಿಕ ಸ್ಥಾನ ಮಾನಗಳೊಂದಿಗೆ ಪ್ರಸ್ತುತದಲ್ಲಿ ಮುಸ್ಲಿಂ ಮಹಿಳೆಯ ಸಾಮಾಜಿಕ ಬದುಕಿನ ಅಧ್ಯಯನ ಮಾಡುವ ಅಗತ್ಯವಿದೆ. ಪುರುಷ ಪ್ರಾಧಾನ್ಯತೆಯಲ್ಲಿ ರೂಪು ಪಡೆದ ಕೋಮುವಾದವು ಮಹಿಳಾ ಸಮುದಾಯದ ಮೇಲೆ ಬೀರಿದ ಪರಿಣಾಮಗಳು ಏನು ಎಂಬುದನ್ನು ತಿಳಿದುಕೊಳ್ಳಲಾಗಿದೆ.

ಧರ್ಮಾಧಾರಿತ ಕೋಮುವಾದವಾಗಲಿ, ಧರ್ಮವಾಗಲಿ ಮಹಿಳೆಯ ಜೈವಿಕ ಸಂಗತಿಗಳನ್ನು ಪ್ರಧಾನವಾಗಿಟ್ಟುಕೊಂಡಿವೆಯೆ ಅಥವಾ ಕುಟುಂಬ ವಿವಾಹದಂತಹ ಸಾಮಾಜಿಕ ಸಂಸ್ಥೆಗಳನ್ನು ಪ್ರಧಾನವಾಗಿ ಪರಿಗಣಿಸಿವೆಯೇ ಎಂಬುದನ್ನು ಕಂಡುಕೊಳ್ಳುವ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ.

ಮಹಿಳೆಯ ಜೈವಿಕತೆಯ ಕುರಿತು ಕಟ್ಟಿಕೊಟ್ಟ ಗ್ರಹಿಕೆಗಳೇ ಅವಳ ಸಾಮಾಜಿಕ ಸ್ಥಿತಿ-ಗತಿಗೆ ಕಾರಣವಾಗಿರಬಹುದೇ ಎಂಬುದನ್ನು ಈ ಅಧ್ಯಯನದಲ್ಲಿ ಸ್ಪಷ್ಟಪಡಿಸಲು ಪ್ರಯತ್ನಿಸಲಾಗಿದೆ.

''ಎಲ್ಲಾ ಸಮಾಜಗಳಲ್ಲಿಯೂ ೨ನೇ ದರ್ಜೆಯ ಪ್ರಜೆಯಾದ ಹೆಣ್ಣನ್ನು ಈ ಧರ್ಮವೂ ಭಿನ್ನವಾಗಿ ಕಂಡಿಲ್ಲ. ಇಲ್ಲಿಯೂ ದ್ವಿನೀತಿಯ ಧೋರಣೆಗಳಿವೆ. ಮಾನವೀಯತೆಯೇ ಎಲ್ಲಾ ಧರ್ಮದ ತಿರುಳಾಗಿದೆ. ಹೆಣ್ಣಾಗಿ ಹುಟ್ಟಿದ ತಪ್ಪದಲ್ಲದ ತಪ್ಪಿಗೆ ಮುಸ್ಲಿಂ ಸ್ತ್ರೀ ಅನುಭವಿಸಬೇಕಾದ ಅನಿವಾರ್ಯದ ಸಂಕಟಗಳ ಪ್ರತಿಫಲನ ಬಹು ವಿಚಿತ್ರವಾದದು.

ಮುಸ್ಲಿಂ ಸಮಾಜದ ಸಾಂಪ್ರದಾಯಿಕ ಚೌಕಟ್ಟಿನಲ್ಲೇ ಹೆಣ್ಣಿನ ವ್ಯಕ್ತಿತ್ವ ಕಮರಿಹೋಗುತ್ತಿದೆ. ಸ್ತ್ರೀಯು ಮೂಲ ಕೇಂದ್ರಿತ ವಸ್ತುವಾಗಿದ್ದಾಳೆ. ಸ್ತ್ರೀ ಕೇಂದ್ರಿತ ಆಶಯಗಳೇ ಮೂಲವಸ್ತು, ಆದರೆ ಸ್ತ್ರೀ ಪಾತ್ರಗಳು ಕರ್ತವ್ಯ ನಿರ್ವಹಿಸುತ್ತಾ ಗಾಣದೆತ್ತಿನಂತೆ ಸುತ್ತುತ್ತವೆಯೇ ಹೊರತು-ಸಾಂಪ್ರದಾಯಿಕ ಚೌಕಟ್ಟು ಮೀರಿ ಹೊರ ಬರುವುದಿಲ್ಲ. ವ್ಯವಸ್ಥೆಯ ಚೌಕಟ್ಟಿನಲ್ಲೇ ಪ್ರತಿಭಟಿಸುತ್ತದೆ."[೧]

ಧಾರ್ಮಿಕ ನಿರ್ಬಂಧಗಳು, ಆಚರಣೆಗಳು ಹಾಗೂ ನಿಷೇಧಗಳ ನಡುವೆ ಉಸಿರು ಗಟ್ಟುವ ವಾತವರಣದಲ್ಲಿ ಮುಸ್ಲಿಂ ಮಹಿಳೆ ರೋಸಿ ಹೋಗಿದ್ದಾಳೆ. ಆದರೆ ಎಲ್ಲಾ ಮುಸ್ಲಿಂ ಮಹಿಳೆಯರ ಸಮಸ್ಯೆಗಳು ಒಂದೇ ತೆರನಾಗಿಲ್ಲ. ಅವು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಭಿನ್ನವಾಗಿವೆ. ಭಾರತೀಯ ಮುಸ್ಲಿಂ ಮಹಿಳೆ ಶರಿಯ ಕುರಾನ್‌ನ್ನು ಸರಿಯಾಗಿ ಅರ್ಥೈಸುವುದನ್ನು, ಹಕ್ಕುಗಳನ್ನು, ರಾಜಕೀಯ ಮೀಸಲಾತಿಯನ್ನು ಕೇಳುತ್ತಿರುವ ಸಂದರ್ಭದಲ್ಲಿ ಅಪಘಾನಿಸ್ತಾನ್, ಇರಾಕ್, ಇರಾನಿನ ಮಹಿಳೆಯರ ಬದುಕಿಗಾಗಿ ತಮ್ಮ ನೆಲದ ಮೇಲೆ ಇತರರ ದಾಳಿಯಿಂದ ತತ್ತರಿಸಿದ್ದಾರೆ. ಯುದ್ಧಗಳು ಅವರ ಬದುಕನ್ನು ನುಂಗಿ ಹಾಕುತ್ತಿದ್ದರೆ, ಪಾರೆ ಮಹಿಳೆಯರು ಮರ್ಯದಾ ಹತ್ಯೆ, ಆ್ಯಸಿಡ್ ಪ್ರಕರಣಗಳನ್ನು ವಿರೋಧಿಸುತ್ತಿದ್ದಾರೆ. ಈ ಸಮುದಾಯ (ಜನಾಂಗ)ದ ಮಹಿಳೆಯರ ನೋವುಗಳು ಸಮಸ್ಯೆಗಳು ದೇಶದಂದ ದೇಶಕ್ಕೆ ಭಿನ್ನವಾಗಿವೆ.

ಇಸ್ಲಾಂ ಧರ್ಮ ಎಂದೂ ಮಹಿಳೆಯರನ್ನು ಕ್ರೂರವಾಗಿ ಕಂಡಿದ್ದಿಲ್ಲ. ಆದರೆ ಷರಿಯತ್‌ನ್ನು ಅದರ ತಿರುಳನ್ನು ಸರಿಯಾಗಿ ಅರ್ಥೈಸುವುದು ಅವಶ್ಯಕ. ಆ ಮಹಾಮಾನವತಾವಾದಿ ಪೈಗಂಬರರೂ ಯಾವತ್ತೂ ಬಹು ಪತ್ನಿತ್ವವನ್ನು ತಲ್ಲಾಖ್‌ನ್ನು ಬೆಂಬಲಿಸುವುದಿಲ್ಲ.

ಆಂತರಿಕವಾಗಿ ಧಾರ್ಮಿಕ, (ಸಾಮಾಜಿಕ) ನಿರ್ಭಂಧಗಳನ್ನು ಮಹಿಳೆಯರ ಮೇಲೆ ಹೇರುವುದರ ಮೂಲಕ ಸ್ತ್ರೀಯರ ಅಭಿವೃದ್ಧಿ ಪ್ರಗತಿಗೆ ಮಾರಾಕವಾಗುತ್ತದೆ. ಮುಸ್ಲಿಂ ಮಹಿಳೆಯ ಹಕ್ಕುಗಳು ಅಷ್ಟೇ ಏಕೆ ಬದುಕುವ ಹಕ್ಕನ್ನು ಇದು ಕಿತ್ತುಕೊಳ್ಳುತ್ತದೆ. ಒತ್ತಾಯದ ವಸ್ತ್ರ ಸಂಹಿತೆ ಜಾರಿಗೊಳಿಸಿದೆ, ಮುಸ್ಲಿಂ ಜನಾಂಗದ ಮಹಿಳೆಯರು ತಾವು ಮಾಡದೇ ಇರುವ ತಪ್ಪಿಗಾಗಿ ಶಿಕ್ಷೆ ಅನುಭವಿಸುತ್ತಿದ್ದಾರೆ. ಮಂದಿರ ಮಸೀದಿಗಳು ಸೌಹಾರ್ದತೆಯನ್ನು ಹಾಳು ಮಾಡಲು ನೆಪಗಳಾಗುತ್ತವೆ. ಭಾರತೀಯರ ಮುಸ್ಲಿಂ ಮಹಿಳೆ ಧಾರ್ಮಿಕ ನಿರ್ಬಂಧದಡಿಯಲ್ಲಿ ನಲುಗಿದಂತೆ ವಿಶ್ವದ ಯಾವ ಮೂಲೆಯಲ್ಲೂ ಇರಲಿಕ್ಕಿಲ್ಲ.

''ಮುಸ್ಲಿಂ ಸಮಾಜದ ಅಪಕಲ್ಪನೆಗೆ ಭಾವನೆಗಳು ಸಾಂಪ್ರದಾಯಿಕ ರೂಢಿ ನಿಯಮಗಳು ಬೇರು ಬಿಟ್ಟಿರುವುದರಿಂದ, ಕಠಿಣ ಪಾರಂಪರಿಕ ಧಾರ್ಮಿಕ ನಿರ್ಬಂಧಗಳ ಸ್ತ್ರೀಯು ಕನಿಷ್ಠ ಸ್ವಾತಂತ್ರದಿಂದ ವಂಚಿತವಾಗಿಸಿವೆ.

ಇಸ್ಲಾಂ ಧಾರ್ಮಿಕ ವ್ಯವಸ್ಥೆಯಲ್ಲಿ ಬಹುತೇಕ ಸ್ತ್ರೀಯರಿಗೆ ಸ್ವಾತಂತ್ರ್ಯಕ್ಕಿಂತ ನಿರ್ಬಂಧಗಳೇ ಹೆಚ್ಚು. ಪರದಾ, ಅನಕ್ಷರತೆ, ಅನಾರೋಗ್ಯ, ಅಜ್ಞಾನ, ಇವೇ ಮುಂತಾದ ಪಿಡುಗುಗಳಿಗೆ ಬಲಿಯಾಗುವ ಮಹಿಳೆಯರಿಗೆ ಧರ್ಮದ ಹೆಸರಿನಲ್ಲಿ ಸಮಾಜ ಹೇರಿರುವ ದಿಗ್ಬಂಧನದಿಂದ ಸುಲಭದಲ್ಲಿ ಬಿಡುಗಡೆಯಿಲ್ಲ. ಪುರುಷ ಪ್ರಧಾನ ಮೌಲ್ಯಗಳು

ಹಾಗೂ ಆಚರಣೆಗಳೇ ಅಧಿಕವಾಗಿರುವ ಇಸ್ಲಾಂ ಧರ್ಮದಲ್ಲಿ ಸ್ತ್ರೀಯು ಸಾಧಿಸಿರುವ ಪ್ರಗತಿಯ ಪ್ರಮಾಣ ತೀರಾ ಕಡಿಮೆ.''[೨]

ಕಾನೂನು ಬದಲಾವಣೆಗಳಿಗೆ ಪೂರಕವಾಗಿದ್ದರೂ ಧರ್ಮದ ಹೆಸರಿನಲ್ಲಿ ಪುರುಷ ಪ್ರಧಾನ ವ್ಯವಸ್ಥೆ ಒಡ್ಡಿರುವ ಸವಾಲುಗಳನ್ನು ಮೆಟ್ಟಿ ನಿಲ್ಲುವಂಥ ಈ ಶಕ್ತಿಯನ್ನು ಇಸ್ಲಾಂ ಧರ್ಮ ಮಹಿಳೆಯರು ಪಡೆದಾಗಲೇ ಅವರ ಪರಿಸ್ಥಿತಿಯಲ್ಲಿ ಸಮಗ್ರ ಬದಲಾವಣೆ ಸಾಧ್ಯ.

''ಸಾಂಪ್ರದಾಯಿಕ ಧರ್ಮಾಚರಣೆ ಒಂದು ವಿಧಿ ವಿಧಾನಗಳ ಕಟ್ಟಳೆ ಮಾತ್ರವಾಗಿರದೆ ಬದುಕಲು ಮಾರ್ಗದರ್ಶನ ನೀಡುವಂಥಹುದೂ ಆಗಿರಬೇಕು. ಆದರೆ ಮೂಢನಂಬಿಕೆಗಳ ಬಲೆ ಹೆಣೆದ ಸಾಮಾಜಿಕ ವ್ಯವಸ್ಥೆಯು ಧರ್ಮದೊಳಗಿನ ತನ್ನ ಅಂಧ ಆಚರಣೆಗಳನ್ನು ತ್ಯಜಿಸದೆ ಹೋದರೆ ಅವೈಚಾರಿಕತೆಯ ಕೊಳೆ ನಿವಾರಣೆ ಹೇಗೆ ತಾನೆ ಸಾಧ್ಯ? ಸಾಂಪ್ರದಾಯವಾದಿ ಮನೋಧರ್ಮ ಉಳ್ಳ ಮಹಿಳೆಯರು ಈ ಸಂಪ್ರದಾಯದ ಸ್ಥಿತಿ-ಗತಿಗಳಿಂದ ಹೊರ ಬರಬೇಕಾದ ಪರಿಸ್ಥಿತಿ ನಿರ್ಮಾಣವಾಗಬೇಕಾಗಿದೆ.

ಸಾಂಪ್ರದಾಯಿಕ ಮನೋಧರ್ಮ, ಮೂಢನಂಬಿಕೆ, ಕಂದಾಚಾರಗಳು ವಿಕೃತ ನಡವಳಿಕೆಗಳಿಂದ ಮಹಿಳೆಯರ ಖಾಸಗಿ ಬದುಕಿನ ಸ್ವಾತಂತ್ರ್ಯ ಹರಣವೂ ಆಗುತ್ತಿದೆ. ಸಾಮಾಜಿಕ ವ್ಯವಸ್ಥೆಯ ಕ್ರೌರ್ಯಗಳಿಗೆ ಪ್ರತಿಭಟನೆಯಾಗಿ ನೇರವಾಗಿ ಸಂಘರ್ಷಕ್ಕೆ ಇಳಿಯಬೇಕಾದ ಸಾಮರ್ಥ್ಯ ಪಡೆಯುತ್ತಿರುವುದು ಅನಿವಾರ್ಯ ಆಶಾದಾಯಕ ಬೆಳವಣಿಗೆ. ಹೆಣ್ಣಿನ ಅಂತರಾಳದ ನೋವು, ಆಕ್ರೋಶಗಳಿಂದ, ಅಸಹಾಯಕತೆಯ ಹಿನ್ನೆಲೆಯಲ್ಲಿ ಗಟ್ಟಿಗೊಂಡು ಪ್ರತಿಭಟನೆಯು ಸ್ವರೂಪ ತಳೆದದ್ದು ಬದಲಾವಣೆಯ ಸನ್ನದ್ಧತೆಯಾಗಿದೆ.''[೩]

ಒಟ್ಟಾರೆಯಾಗಿ ಆಯಾ ಧರ್ಮಗಳಿಗೆ ಅನುಗುಣವಾಗಿ ಮಹಿಳೆಯರ ಸ್ಥಾನ-ಮಾನ, ವೈಧವ್ಯದ ಆಚರಣೆಗಳು ಇವೆ. ಎಲ್ಲಾ ಧರ್ಮದಲ್ಲಿಯೂ ಸಹ ವಿಧವೆಯಾದವಳು ಹಿಂಸೆಯನ್ನು ಅನುಭವಿಸುತ್ತಿದ್ದಾಳೆ. ಆದರೂ ಸಹ ಮಹಿಳೆಯ ಸ್ಥಿತಿ-ಗತಿಗಳು ಪ್ರವಾದಿ ಮಹ್ಮದ್‌ನ ಕಾಲದಿಂದ ಸ್ವಲ್ಪ ಮಟ್ಟಿಗೆ ಸುಧಾರಿಸಿವೆ. ಆದರೆ ಧರ್ಮವು ಹೇರಿದ ನಿಯಮಗಳನ್ನು ಚಾಚು ತಪ್ಪದೇ ಆಚರಿಸಬೇಕಾಗಿದೆ.

''ಇಸ್ಲಾಂ ಧಾರ್ಮಿಕ ವ್ಯವಸ್ಥೆಯು ವಿಧಿಸಿದ ನಿಷೇಧಗಳಿಗೆ ಮಹಿಳೆ (ಸಮುದಾಯ) ಬಲಿಯಾದುದಕ್ಕೆ ಹಲವಾರು ಉದಾಹಣೆಗಳು ನಮಗಿಂದು ದೊರಕುತ್ತವೆ. ಆದರ್ಶ ಮಗಳಾಗಿ, ಸಹನಶೀಲ ಹೆಂಡತಿಯಾಗಿ, ಸೌಜನ್ಯಯುತ ಸೊಸೆಯಾಗಿ, ಒಟ್ಟಾರೆ ಸ್ಥಾಪಿತ ಮೌಲ್ಯಗಳಿಗೆ ವಿನಯಶೀಲಳಾಗುವ ಸ್ತ್ರೀ ಮಾದರಿಗಳು ಸಾಮಾಜಿಕ ಮನ್ನಣೆಯನ್ನು ಪಡೆದುಕೊಳ್ಳುತ್ತವೆ. ಇವು ಸಹ ಯಾವುದೇ ಧರ್ಮದ ನಿಯಮಗಳಿಂದ ಭಿನ್ನವಾಗಿಲ್ಲ ಎಂದೇ ಹೇಳಬಹುದು.

ಮುಸ್ಲಿಂ ಮಹಿಳೆಗೆ ಪ್ರತ್ಯೇಕವಾದ ಸಾಮಾಜಿಕ ಭಾಗವಹಿಸುವಿಕೆ ಎಂಬುದಿಲ್ಲ. ಅದೇನಿದ್ದರೂ ಧಾರ್ಮಿಕ ಪರಿಧಿಯೊಳಗೆ ಕಾಣಿಸಿಕೊಳ್ಳುತ್ತದೆ. ಧರ್ಮದೊಳಗೆ ಮಹಿಳೆಯರ ಭಾಗವಹಿಸುವಿಕೆ ಯಾವ ಸಂದರ್ಭದಲ್ಲಿ ಮತ್ತು ಎಷ್ಟು ಪ್ರಮಾಣದಲ್ಲಿರುತ್ತದೆ. ಎಂಬುದು ಪ್ರಮುಖವಾಗಿರುತ್ತದೆ. ಧಾರ್ಮಿಕ ರಂಗದಲ್ಲಿ ಒಂದು ಸೀಮಿತ ಮಿತಿಯವರೆಗೆ ಮಾತ್ರ ಮಹಿಳೆಯರ ಪಾತ್ರವಿದ್ದು, ಅದು ಪುರುಷರು ಹಾಕಿದ ಲಕ್ಷ್ಮಣ ರೇಖೆಯನ್ನು ದಾಟುವುದಿಲ್ಲ. ತಮ್ಮ ಸ್ವಾರ್ಥಕ್ಕೆ ಭದ್ರ ತಳಪಾಯವಾಗುವಂತೆ, ಪೂರಕವಾಗುವಂತೆ ಸ್ತ್ರೀಯನ್ನು ಧಾರ್ಮಿಕ ವ್ಯವಸ್ಥೆಯೊಳಗೆ

ಆದರ್ಶದ ಮುದ್ರೆಯಾಗಿ ಚಿತ್ರಿಸಿದ್ದಾರೆ. ಬಳಸಿಕೊಂಡಿದ್ದಾರೆ. ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಧರ್ಮ ಬಹಿಷ್ಕೃತಳಾಗಿಯೂ ಧಾರ್ಮಿಕ ಅಂಶಗಳನ್ನು ಉಳಿಸಿಕೊಂಡು ಹೋಗುವ ಜವಾಬ್ದಾರಿ ಅವಳ ಮೇಲೆ ಇರುವುದು ವಾಸ್ತವ ವ್ಯಂಗ್ಯ ಎನ್ನುವ ಮಾತು ಸಮರ್ಥನೀಯವಾಗಿದೆ.''[೪]

## ೩.೨. ಮುಸ್ಲಿಂ ಮಹಿಳೆಯ ಪರದಾ ಪದ್ಧತಿ

''ಪ್ರಕೃತಿಯ ಇತರ ಎಲ್ಲಾ ಸೃಷ್ಟಿಗಳಂತೆ ಮಾನವರನ್ನು ಜೋಡಿಗಳಾಗಿ ಸೃಷ್ಟಿಸಿದೆ ಮತ್ತು ಅದರ ಮಧ್ಯೆ ಪರಸ್ಪರ ಆಕರ್ಷಣೆ ಆಸಕ್ತಿಗಳನ್ನು ಇರಿಸಿವೆ. ಇತರ ಸೃಷ್ಟಿಗಳಲ್ಲಿ ಈ ಸ್ತ್ರೀ ಪುರುಷ ವರ್ಗೀಕರಣ ಮತ್ತು ಆಕರ್ಷಣೆಯೂ ಕೇವಲ ಸಂತಾನ ಅಭಿವೃದ್ಧಿಗಾಗಿ ಮಾತ್ರ ಸೀಮಿತವಾಗಿದೆ. ಆದರೆ ಮಾನವರಲ್ಲಿ ಈ ವಿಂಗಡಣೆ ಮತ್ತು ಆಕರ್ಷಣೆಯ ಸೀಮಾತೀತವಾಗಿದೆ. ಅನಿಯಂತ್ರಿತವಾಗಿದೆ.

ಮುಸ್ಲಿಂ ಸ್ತ್ರೀಯು ತನ್ನ ಅಲಂಕಾರವನ್ನು ಪತಿ, ವಿವಾಹ ನಿಷಿದ್ಧ ಬಂಧುಗಳು, ಸೇವಕರು, ಎಳೆಯ ಬಾಲಕರು ಮತ್ತು ಇತರ ಸ್ತ್ರೀಯರ ಮುಂದೆ ಮಾತ್ರ ಪ್ರದರ್ಶಿಸಬಹುದು. ಈ ಸೀಮಿತ ವಲಯದಿಂದ ಹೊರಗಿರುವ ಎಲ್ಲಾ ಪುರುಷರ ಮುಂದೆಯೂ ಸ್ತ್ರೀಯು ಪರದಾ ನಿಯಮವನ್ನು ಪಾಲಿಸಲೇ ಬೇಕು. ಈ ನಿರ್ಬಂಧವೂ ಯಾವುದೇ ರೀತಿಯಲ್ಲಿ ಸ್ತ್ರೀ ಸ್ವತಂತ್ರ ಹರಣವಾಗಿರದೇ ಆಕೆಯ ಮಾನ ಮರಿಯಾದೆಯನ್ನು ರಕ್ಷಿಸಿ ಸಮಾಜವನ್ನು ಅನೇಕ ಅಶ್ಲೀಲತೆ, ಅನೈತಿಕತೆ, ಮತ್ತು ಕೆಡಕುಗಳಿಂದ ರಕ್ಷಿಸುವ ಉತ್ತಮ ಮಾಧ್ಯಮವೆಂಬುದು ವೇದ್ಯ.

ಮುಸ್ಲಿಂರಲ್ಲಿ ಪರದಾ ಪದ್ಧತಿಗೆ ವಿಶಿಷ್ಟ ಸ್ಥಾನವಿದೆ. ಅದಕ್ಕಾಗಿ ಹೆಣ್ಣು ಮಕ್ಕಳು ಪರದಾ ಪದ್ಧತಿಯನ್ನೂ ಅನುಸರಿಸುತ್ತಾರೆ. ತಮ್ಮ ನೇರ ರಕ್ತಸಂಬಂಧಿಕರನ್ನು ಬಿಟ್ಟು ಅನ್ಯ ಪುರುಷರು ತಮ್ಮನ್ನು ನೋಡಬಾರದು. ಇದಕ್ಕಾಗಿ ಇವರು 'ಬುರಖಾ' ಧರಿಸುತ್ತಾರೆ.''[೫]

ಸಾಮಾನ್ಯವಾಗಿ ನಾವು ಮುಸ್ಲಿಂ ಮಹಿಳೆಯರನ್ನು ಗುರುತಿಸುವುದು ಅವರ ಉಡುಗೆ-ತೊಡುಗೆಗಳಿಂದ ಇವರು ತಲೆಯಿಂದ ಪಾದದವರೆಗೂ ಕಪ್ಪು ಅಥವಾ ಬಿಳಿ ಬಟ್ಟೆಯಿಂದ ಮುಚ್ಚಿಕೊಂಡಿರುತ್ತಾರೆ. ಇಲ್ಲಿ ಅವರು ನೋಡಲು ಸ್ವಲ್ಪ ಕಣ್ಣುಗಳನ್ನು ಹೊರತು ಪಡಿಸಿದರೆ ಉಳಿದಂತೆ ಎಲ್ಲಾ ಭಾಗಗಳು ಮುಚ್ಚಿಕೊಂಡೆ ಇರುತ್ತವೆ. ಹೆಂಗಸರು ಕಾಮುಕರ ದೃಷ್ಟಿಯಿಂದ ಉಳಿಯಲು ಇಂತಹ ಪದ್ಧತಿಯು ಜಾರಿಗೆ ಬಂದಿತು ಎಂದು ವಾದಿಸುವ ಮೂಲಭೂತವಾದಿಗಳು ಇದ್ದಾರೆ.

ಇಂತಹ ಒಂದು ಸಂದರ್ಭದಲ್ಲಿ ಹೊಸಪೇಟೆಯ ಕ್ಷೇತ್ರಕಾರ್ಯದಲ್ಲಿ ವಕ್ತೃ ಒಬ್ಬರು ಪರ್ದಾ ಬಗ್ಗೆ ಪ್ರತಿಕ್ರಿಯಿಸಿದ ರೀತಿ ಹೀಗಿತ್ತು ಬುರ್ಕಾ ಕೇವಲ ತಮ್ಮ ದೇಹವನ್ನು ಮರೆಮಾಚುವುದಲ್ಲದೆ, ಸೂರ್ಯನ ಪ್ರಖರ ಕಿರಣಗಳಿಂದ ಸೂಕ್ಷ್ಮ, ಕೋಮಲ ತ್ವಚೆಯನ್ನುಳ್ಳ ಹೆಣ್ಣುಮಕ್ಕಳು ಅನೇಕ ರೋಗಗಳಿಂದಲೂ ರಕ್ಷಣೆಯನ್ನು ಪಡೆಯಬಹುದು ಹಾಗೂ ಪುರುಷರ ಕೆಟ್ಟ ದೃಷ್ಟಿಯಿಂದಲೂ ರಕ್ಷಿಸಿಕೊಳ್ಳಲು ಸಹಾಯಕ. ಇದುವರೆಗೂ ಏನೇ ಅನಾಹುತಗಳಾಗಿದ್ದರೂ ಅದು ಬುರ್ಕಾ ಧರಿಸದೇ ಇರುವುದರಿಂದ ಎಂದು ಹೇಳುತ್ತಾರೆ. ದೊಡ್ಡ ನಗರಗಳಲ್ಲಿ ಹುಡುಗಿಯರಿಗೆ ತೊಂದರೆಗಳು ಅತ್ಯಾಚಾರಗಳಾಗುವುದು ಇದರಿಂದಲೇ ಎಂದು ಹೇಳುತ್ತಾರೆ. ಹಾಗೂ ಶಾಲಾ ಕಾಲೇಜು ಉದ್ಯೋಗಸ್ಥ ಮಹಿಳೆಯರಿಗೂ ಸಹ ಬುರ್ಕಾ ಕಡ್ಡಾಯ. ಇವರು ಸಂದರ್ಭಕ್ಕನುಗುಣವಾಗಿ

ಇತರರೊಂದಿಗೆ ಬೆರೆಯಬಹುದು ಅಂದರೆ ಆಯಾ ಸಮಯದಲ್ಲಿ ತಮ್ಮ ಮುಖ ಕೈಕಾಲುಗಳಿಂದ ಅವರು ಬುರ್ಕಾದಿಂದ ಸ್ವಲ್ಪ ಸರಿದು ಮಾತಾಡಬಹುದು. ಷರಿಯತ್‌ನಲ್ಲಿ ಇಂತಹ ರಿಯಾಯಿತಿ ಇದೆ ಎಂದು ಹೇಳಿದ್ದಾರೆ. ಪುರುಷರಿಗೆ ಯಾವುದೇ ರೀತಿಯ ವಸ್ತ್ರ ಸಂಹಿತೆಯ ಬಗ್ಗೆ ಕೇಳಿದಾಗ ಅಸಹಜವಾದಂತಹ ಪ್ರತಿಕ್ರಿಯೆ ಬಂದಿತು ಪುರುಷರು ತಮ್ಮ ದೃಷ್ಟಿಗಳನ್ನು ಕೆಳಗಿರಿಸಬೇಕು, ಹಾಗಾದಗ ಮಾತ್ರ ಅವರು ಬುರ್ಕಾ ಪಾಲಿಸಿದಷ್ಟೇ ನಿಯಮ ಸಾರ್ಥಕ ಎಂದು ಮೂಲತಃ ಚಿತ್ರದುರ್ಗದವರಾದ ಈ ಮಹಿಳೆ ಹೊಸಪೇಟೆಗೆ ಎಸ್.ಆರ್.ನಗರದ ಮುಸ್ಲಿಂ ಮಹಿಳೆಯರಿಗೆ ಕುರಾನ್ ಅಬ್ಯಾಸ ಮಾಡಿಸಲು ಬಂದಿರುವುದಾಗಿ ತಿಳಿಸಿದರು.

ಇದು ಯಾವ ಅವಧಿಯಲ್ಲಿ ಜಾರಿಗೆ ಬಂದಿತು ಎಂದು ಅರಿಯಲು ಹೆಚ್ಚಿನ ವಿವರಣೆಗಳು ಸಹ ಇಲ್ಲದಿರುವುದು ದುಸ್ತರವೆ. ಈವರೆಗೂ ಈ ಪದ್ದತಿಯ ಆರಂಭದ ಬಗ್ಗೆ ಮತ್ತು ಆಚರಣೆಗಳ ಬಗ್ಗೆ ಚಾರಿತ್ರಿಕ ದಾಖಲೆಗಳು ಹಾಗೂ ಕೃತಿಗಳು ಇದನ್ನು ಸಮರ್ಥಿಸಲು ನಮಗೆ ದೊರಕಿಲ್ಲ.

ಸಮರ್ಪಕವಾದ ಯಾವುದೇ ಐತಿಹಾಸಿಕ ದಾಖಲೆಯು ಸಹ ಇದಕ್ಕೆ ಪುಷ್ಠಿಯನ್ನು ಒದಗಿಸಲು ಈವರೆಗೂ ಸಾಧ್ಯವಾಗಿಲ್ಲ. ಮುಸ್ಲಿಂ ಮೂಲಭೂತವಾದಿಗಳು ಮುಸ್ಲಿಂ ಮಹಿಳೆಯು ಮನೆಯಿಂದ ಹೊರಗೆ ಬರುವಾಗ ಕಡ್ಡಾಯವಾಗಿ ಬುರುಖಾ ಧರಿಸಿಕೊಂಡು ಬರಬೇಕು ಎಂಬ ಧಾರ್ಮಿಕ ನಿರ್ಬಂಧನೆಯನ್ನು ಹೇರಿದ್ದಾರೆ.

ಬುರ್ಕಾ ಪದ್ದತಿಯನ್ನು ಸಮರ್ಥಿಸಲು ಮುಸ್ಲಿಂ ಮೂಲ ಭೂತವಾದಿಗಳು ಪಾಶ್ಚಾತ್ಯ ದೇಶಗಳಲ್ಲಿ ವ್ಯಾಪಕವಾಗಿರುವ ಲೈಂಗಿಕ ಸ್ವೇಚ್ಛಾಚಾರ, ಕೌಟುಂಬಿಕ ಮೌಲ್ಯಗಳ ಪತನ, ಇವುಗಳನ್ನೇ ಪ್ರಮುಖವಾಗಿ ಗುರ್ತಿಸುತ್ತಾರೆ. ಕುರಾನ್‌ನಲ್ಲಿ ಉಲ್ಲೇಖಿಸಿರುವಂತಹ ಎಲ್ಲವೂ ಕೂಡ ಅಕ್ಷರಶಃ ಸತ್ಯ ಮತ್ತು ಅದು ಸಾರುವಂತಹ ತತ್ವಗಳು ಕಾಲತೀತವಾದ ಮೌಲ್ಯಗಳೆಂದೆ ಭಾವಿಸಿಕೊಂಡಿದ್ದಾರೆ.

ಕುರಾನ್‌ಗೆ ವಿರುದ್ಧವಾದ ಹಾಗೂ ಭಿನ್ನ ನಿಲುವು ಹೊಂದಿರುವಂತಹ ವ್ಯಕ್ತಿಗಳನ್ನು ಇಸ್ಲಾಂ ಬೋಧಿಸುತ್ತದೆ. (ಉದಾಹರಣೆಗೆ ಬಾಲಿವುಡ್ ನಟಿಯಾದ ಶಬನಾ ಅಜ್ಮಿ ಮತ್ತು ಭಾರತದ ಇಸ್ಲಾಂ ಧರ್ಮದ ಪ್ರಮುಖನಾದ ಬುಕಾರಿಯ ನಡುವೆ ಈ ಕಾರಣಗಳಿಂದಲೆ ಪ್ರತಿದಿನವೂ ವಾಗ್ವಾನಗಳು ನಡೆಯುತ್ತವೆ. ಯಾಕೆಂದರೆ, ಶಬನಾ ಧರ್ಮಕ್ಕೆ ವ್ಯತಿರಿಕ್ತವಾದಂತಹ ಉಡುಗೆ-ತೊಡುಗೆಗಳನ್ನು ಧರಿಸುವುದು, ಹಾಗೂ ಹಿಂದೂಗಳಲ್ಲಿ, ಕ್ರಿಶ್ಚಿಯನ್ ಅಚಾರಗಳನ್ನು ಪಾಲಿಸುವುದು ಹಾಗೂ ಇಸ್ಲಾಂಗೆ ವಿರುದ್ಧವಾದ ರೀತಿಯಲ್ಲಿ ನಡೆದುಕೊಳ್ಳುತ್ತಿರುವುದು ಇದಕ್ಕೆ ಪ್ರಮುಖ ಕಾರಣವಾಗಿದೆ). ಕುರಾನ್‌ಗೆ ಹೊರತಾಗಿಯು ವಿರೋದವಾಗಿಯು ಅಥವಾ ಅದನ್ನು ಮೀರಿದ ಯಾವ ಸತ್ಯವು ಸಾಧ್ಯವಿಲ್ಲ. ಅದು ಸಾಧುವು ಅಲ್ಲ ಎಂಬ ಅತಿರೇಕದ ನಿಲುವುಗಳು ಸಂಪ್ರದಾಯಿಕ ಮನಸ್ಸುಗಳಲ್ಲಿ ಅಡಗಿದೆ. ಕುರಾನ್ ಜಗತ್ತಿನ ಇತಿಹಾಸದಲ್ಲಿ ಒಂದು ನಿರ್ದಿಷ್ಟ ಕಾಲಘಟ್ಟದಲ್ಲಿ ಮೂಡಿ ಬಂದ ಒಂದು ಕೃತಿ, ಆಯಾ ಕಾಲದ ಛಾಪು ಅದರ ಮೇಲಿದೆ. ಆದುದರಿಂದ ಈ ಗ್ರಂಥದ ಚಾರಿತ್ರಿಕ ಮಹತ್ವವನ್ನು ಅಕ್ಷರಶಃ ಪಾಲನೆ ನಡೆಯುತ್ತಿರುವುದು ನಿಜ.

ಭಾರತದಲ್ಲಿ ನಾವು ಬುರುಖಾ ಪದ್ಧತಿಗೆ ಮುಂಚೆಯೇ ಪರದಾ ಪದ್ದತಿಯನ್ನು ಕಾಣಬಹುದು. ಬುರುಖಾ ಪದ್ದತಿಯು ಭಾರತದಲ್ಲಿ ಕಾಣಿಸಿಕೊಂಡಿದ್ದು ಮೊಘಲರ ಕಾಲಾವಧಿಯಲ್ಲಿ, ಅದಕ್ಕೂ ಮುಂಚೆಯೇ ಇದು ಅನಾದಿ ಕಾಲದಿಂದಲೇ ಅರಬ್‌ನಲ್ಲಿ ಇತ್ತು ಎಂಬುದು ಕೆಲವು ಚರ್ಚೆಗಳಲ್ಲಿಯೂ ಕಾಣಿಸಿಕೊಂಡಿದೆ.

ಮೊಗಲರ ಕಾಲಾವಧಿಯಲ್ಲಿ ಹಿಂದೂ ಮುಸ್ಲಿಂ ಎರಡೂ ಜನಾಂಗಗಳಲ್ಲಿಯೂ ಈ ರೀತಿಯ ಪದ್ಧತಿ ಇತ್ತು. ಎಂಬುದಕ್ಕೆ ಹಲವಾರು ಚಾರಿತ್ರಿಕ ದಾಖಲೆಗಳು ತೋರ್ಪಡಿಸಿವೆ. ಇದು ಅಂದು ಯಾವರೀತಿ ಸಾಮಾಜಿಕ ಜೀವನ ದೊಂದಿಗೆ ಬೆಸೆದುಕೊಂಡಿತ್ತು. ಎಂದರೆ ಬುರುಕಾ ಧರಿಸುವುದು ಸಾಮಾಜಿಕ ಪ್ರತಿಷ್ಠೆಯಾಗಿ ಗುರ್ತಿಸಲ್ಪಡುತ್ತಿತ್ತು.

ಮುಸ್ಲಿಂ ಮಹಿಳೆಯು ಬಾಹ್ಯ ಜನಗತ್ತಿನ ಮುಖ ನೋಡುವ ಸಮಯದಲ್ಲಿ ಕಡ್ಡಾಯವಾಗಿ ಬುರುಖಾ ಧರಿಸಿಕೊಂಡೆ ಬರಬೇಕು ಎಂಬುದು ಶರಿಯತ್ ನಿಲುವು, ಮನೆಯ ಹೊರಗಿನ ಸ್ಥಿತಿ ಇದಾದರೆ, ಮನೆಯೊಳಗಿನ ಅವಳು, ಗಂಡ, ಮಕ್ಕಳು ತಂದೆ ಸೋದರರ ಹೊರತುಪಡಿಸಿದರೆ, ಬೇರೆ ಯಾರೊಂದಿಗೂ ಸಹ ತೆರೆದ ಮುಖದಿಂದ ಮಾತನಾಡುವಂತಿಲ್ಲ. ಬುರುಕಾ ಅಥವಾ ಪರಿದಿಯ ಹಿಂಬದಿಯಿಂದಲೇ ಮಾತನಾಡಬೇಕು. ಮಹಿಳೆಯನ್ನು ನೋಡುವುದರಿಂದಲೇ ಪುರುಷರಲ್ಲಿ ವಿಷಯಾಸಕ್ತಿ ಉಂಟಾಗುತ್ತದೆ ಎಂಬ ಕಾರಣಕ್ಕಾಗಿಯೇ ಬುರುಕಾ ಅವಶ್ಯ ಎಂದು ಇಸ್ಲಾಂ ನಂಬುತ್ತದೆ.

ಭಾರತದ ಮೊಟ್ಟ ಮೊದಲನೆಯ ಪ್ರಧಾನ ಮಂತ್ರಿಗಳಾದ ಜವಹರ್‌ಲಾಲ್ ನೆಹರು ನೆಹರುರವರು ಈ ಪದ್ಧತಿಯನ್ನು ಕುರಿತು ಹೇಳುವ, ಮಾತು ಇಲ್ಲಿ ಅತ್ಯಂತ ಸೂಕ್ತವಾಗಿದೆ. ಬಾಹ್ಯ ಜಗತ್ತಿನೊಂದಿಗೆ ಬೇರ್ಪಡಿಸಲಾಗದ ಪರದಾದೊಳಗಿನ ಮಹಿಳೆಯ ಕುರಿತು ನಾನು ಚಿಂತಿಸುವಾಗಲೆಲ್ಲಾ ನನಗೆ ಅನಿವಾರ್ಯವಾಗಿ ಜೈಲು, ಪ್ರಾಣಿ ಸಂಗ್ರಹಾಲಯಗಳ ಆಲೋಚನೆಯೇ ಬರುತ್ತದೆ. ತನ್ನ ಅರ್ಧದಷ್ಟು ಜನ ಸಂಖ್ಯೆಯನ್ನು ಜೈಲಿನಲ್ಲಿಟ್ಟು ದೇಶವೊಂದು ಮುಂದುವರೆಯುವುದಾದರೂ ಹೇಗೆ, ಎಂದು ಹೇಳಿದ್ದಾರೆ. ಯಾಕೆಂದರೆ ಬುರುಖಾ ಪದ್ಧತಿಯು ವ್ಯಕ್ತಿತ್ವ ವಿಕಾಸನಕ್ಕೆ ಕಂಠಕಪ್ರಾಯವಾಗಿದೆ.

ಇದು ವ್ಯಕ್ತಿಯ ಕೃತತ್ವಶಕ್ತಿಯನ್ನು ಕುಂದಿಸುತ್ತದೆ. ಸ್ತ್ರೀ ಪುರುಷನ ನಡುವಿನ ಆರೋಗ್ಯಕರ ಸಂಬಂಧವನ್ನು ಕೆಡಿಸುತ್ತದೆ. ಕೋಮುವಾದದ ಹೆಸರಿನಲ್ಲಿ ಕಡ್ಡಾಯಗೊಳ್ಳುತ್ತಿರುವ ಬುರುಕಾ ಪದ್ಧತಿಯ ಮುಸ್ಲಿಂ ಮಹಿಳೆಗೆ ಇಂದು ಯಾವ ಸ್ಥಿತಿಗೆ ತಲುಪಿಸಿದೆ ಎಂಬುದನ್ನು ಭಾರತೀಯ ಚಿಂತಕರು ಅವಲೋಕಿಸುವುದು ಅಗತ್ಯವಿದೆ.

ಇಲ್ಲಿ ಗಮನಿಸಬೇಕಾದ ಅಂಶ ಏನೆಂದರೆ, ಮಹಿಳೆಯ ಮೇಲೆ ಇಷ್ಟೆಲ್ಲ ದಿಗ್ಬಂಧನ ನೀತಿ ನಿಯಮಗಳು ರೂಪಿಸಿ ಜಾರಿಗೆ ತಂದಿರುವ ಧರ್ಮ ಹಾಗೂ ಇದರ ನಿರ್ಮಾತೃಗಳು ಪುರುಷನ ವಿಷಯದಲ್ಲಿ ಉದಾರವಾದಿ ಮನೋಭಾವದಿಂದ ಮೆರೆದಿದ್ದಾರೆ. ಅವನಿಗೆ ಯಾವುದೇ ವಸ್ತ್ರ ಸಂಹಿತೆಯನ್ನು ಧಾರ್ಮಿಕ ಕಟ್ಟಳೆಗಳು ನೀಡಿಲ್ಲ. ಒಂದು ವ್ಯವಸ್ಥೆಯನ್ನೆ ರೂಪಿಸಿ ಅದರ ಮಾಲಿಕತ್ವವನ್ನು ಪಡೆಯುವ ಪಿತೃ ಪ್ರಧಾನತೆಯು ತುಂಬಾ ಜಾಗರೂ ಕತೆಯಿಂದ ಮಹಿಳೆಯನ್ನು ತನಗೆ ಇಷ್ಟ ಬಂದ ರೀತಿಯಲ್ಲಿ ರೂಪಿಸಿಕೊಂಡಿದೆ ಎಂದರೆ ತಪ್ಪಾಗಲಾರದು.

ಈ ಬಗೆಯಲ್ಲಿ ಅವಳ ಮೇಲಿನ ವಿವಿಧ ನಿಯಮಗಳು ನೀತಿ-ಸಂಹಿತೆಗಳು, ದಿಗ್ಬಂಧನಗಳು, ರೂಪು ಗೊಳಿಸಿರುವುದು. ಸ್ವತಃ ಮಹ್ಮದ್ ಪೈಗಂಬರರು ಇಂತಹ ಬುರುಖಾ ಪದ್ಧತಿಯನ್ನು ಎಂದು ಸಹ ಸಮರ್ಥಿಸಿಲ್ಲ. ಇವರ ಮಗಳಾದ ಫಾತೀಮಾಳು ವಿವಿಧ ಧಾರ್ಮಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿದ್ದಳು. ಅಲ್ಲಿ ಕೆಲವು ವಿಚಾರಗಳನ್ನು ತಾನೇ ಮಂಡಿಸುತ್ತಿದ್ದಳು. ಇವರ ಪತ್ನಿಯಾದ ಆಯೇಶಾಳು ಒಂಟೆಗಳ ಸ್ಪರ್ಧೆಯಲ್ಲಿ ಮುಂದಾಳುತ್ವವನ್ನು ವಹಿಸಿ ಸವಾರರಿಗೆ ಹುರಿದುಂಬಿಸುತ್ತಿದ್ದಳು. ಇಂತಹ ನಿಲುವು ಮಹ್ಮದರಿಗೆ ಇರಲಿಲ್ಲ.

ಅವರ ನಂತರ ಬಂದಂತಹ ಉಲೇಮಾಗಳು ರೂಪಿಸಿದ ಬಲೆ ಇದು ಎಂದು ಸೈಯ್ಯದ್ ಅಮೀರ್ ಅಲಿ ವಾದಿಸುತ್ತಾರೆ. ಇಂತಹ ಪದ್ಧತಿಗೆ ಒಳಗಾಗಿರುವ ಮಹಿಳೆಯು ಈವರೆಗೂ ಎಲ್ಲಿಯೂ ಇಂತಹ ಅನಾಚಾರ ಪದ್ಧತಿಯ ವಿರುದ್ಧ ಬಂಡಾಯ ಇಲ್ಲವಾದ್ದರಿಂದ ಇದರೊಂದಿಗೆ ಮುಸ್ಲಿಂ ಮಹಿಳೆಯು ಅನು ಸಂಧಾನ ಮಾಡಿಕೊಂಡೆ ಸಾಗಿದ್ದಾಳೆಂದು ನಾವು ಗುರುತಿಸಬಹುದು.

''ಕಳೆದ ವರ್ಷ ಅಲಹಾಬಾದ್‌ನ ಒಂದು ಶಾಲೆಯಲ್ಲಿ ಅಚಾನಕ್ ಆಗಿ ಒಂದು ಹುಡುಗಿ ಶಾಲಾ ಸಮವಸ್ತ್ರಗಳ ಬದಲಿಗೆ ಬುರುಖಾ ಧರಿಸಿಕೊಂಡು ಬಂದಳು ಇದನ್ನು ಪ್ರಶ್ನಿಸಿ ಶಾಲಾ ಶಿಕ್ಷರು ಹಾಗೂ ಆಡಳಿತ ಮಂಡಳಿಯ ಅವಳಿಗೆ ನಾಳೆಯಿಂದ ಸಮವಸ್ತ್ರ ಧರಿಸಿಕೊಂಡು ಬರುವಂತೆ ಆದೇಶಿಸಿದರು. ಆದರೆ ಇದನ್ನು ಅರಿತು ಈ ಹುಡುಗಿಯ ತಂದೆಯು ತನ್ನ ಸಮುದಾಯದ ಮುಂದೆ ಇದನ್ನು ತಿಳಿಸಿ ಸಮುದಾಯದ ಎಲ್ಲಾ ಹುಡುಗಿಯರು ಬುರುಖಾ ಹಾಕಿಕೊಂಡೆ ಹೋಗುವಂತೆ ಒತ್ತಡ ಹೇರಲಾಯಿತು. ತದನಂತರ ಆ ಶಾಲೆಯೊಳಗೆ ಮರುದಿನ ಎಲ್ಲಾ ಇಪ್ಪತೆರಡು ಮುಸ್ಲಿಂ ಹುಡುಗಿಯರು ಆ ಶಿಕ್ಷಕರಿಗೆ ಬುರುಕಾದೊಂದಿಗೆ ಪ್ರತ್ಯಕ್ಷವಾದರು. ಚಿಕ್ಕ ವಯಸ್ಸಿನಲ್ಲಿಯೇ ಸಹಪಾಠಿಗಳೊಂದಿಗೆ ಸಂತೋಷವಾಗಿ ಬೆಳೆಯಬೇಕಾದ ಹುಡುಗಿಯರು ಈ ಅವಧಿಯಲ್ಲೆ ಇಂತಹ ಅವೈಚಾರಿಕ ವಿಧಾನಕ್ಕೆ ಬಲಿಯಾಗುವುದು ಇಸ್ಲಾಂ.

೨೦೦೧ ರಲ್ಲಿ ಕಾಶ್ಮೀರ್ ಕಣಿವೆಯಲ್ಲಿ ಮುಸ್ಲಿಂ ಮಹಿಳೆಯರು ಕಡ್ಡಾಯವಾಗಿ ಬುರುಕಾ ಧರಿಸಬೇಕು ಎಂದು ಅಲ್ಲಿ ಉಗ್ರವಾದಿ ಸಂಘಟನೆಯಾದ ಲಷ್ಕರ್‌ಇ ಜಬ್ಬರ್ ಬಹಿರಂಗವಾಗಿಯೇ ಸಾರಿತು. ಒಂದು ವೇಳೆ ಅವಳು ಬುರುಕಾ ಧರಿಸದೆ ಹೊರಗೆ ಬಂದರೆ ಅವಳ ಮೇಲೆ ಆ್ಯಸಿಡ್ ಎರಚಲಾಗುತ್ತದೆ. ತಂಬ ಭಯವನ್ನು ಹರಡಿಸಿತು, ಇದರಿಂದ ಅಲ್ಲಿಯ ಪ್ರತಿಯೊಬ್ಬ ಮುಸ್ಲಿಂ ಮಹಿಳೆಯು ಸಹ ಬುರುಕಾ ಧರಿಸುವುದು ಕಡ್ಡಾಯವಾಯಿತು. ಆದರೆ ಇದನ್ನು ಅಲ್ಲಿಯ ಸರಕಾರವಾಗಲಿ ಅಥವಾ ಇನ್ನಿತರ ಸರ್ಕಾರೇತ್ತರ ಸಂಘ ಸಂಸ್ಥೆಗಳು ಯಾವುದೇ ವಿಧವಾದ ವಿರೋಧ ವ್ಯಕ್ತಪಡಿಸದು. ಇದ್ದದ್ದನ್ನು ನೋಡಿದರೆ ಇದು ಪರೋಕ್ಷವಾಗಿ ಅವುಗಳಿಗೆ ಬೇಕಾಗಿರುವುದು ಸಹ ಇದೆ. ಎಂಬ ಭಾವನೆ ಸಹಜವಾಗಿಯೇ ನಮ್ಮಲ್ಲಿ ಮೂಡಬಹುದು.

ಇಂತಹ ನೀತಿ ಸಂಹಿತೆಗಳನ್ನು ಜಾರಿಗೊಳಿಸುವ ಮೂಲಕ ಮಹಿಳೆಯರ ಮಧ್ಯದ ಒಗ್ಗಟ್ಟನ್ನು ಹೊಡೆದು ಅವರ ಚಲನ ಶೀಲತೆಯನ್ನು ಅಭಿಪ್ರಾಯವನ್ನು ಕುಂಠಿತಗೊಳಿಸಲಾಗುತ್ತದೆ. ಧಾರ್ಮಿಕ ಮೂಲಭೂತವಾದಿಗಳು ಧರ್ಮ ಹಾಗೂ ಸಂಸ್ಕೃತಿಯ ಹೆಸರಿನಲ್ಲಿ ಕೌಟುಂಬಿಕ ಮೌಲ್ಯಗಳ ಹೆಸರಿನಲ್ಲಿ ಭಯೋತ್ಪಾದನೆ ಆಕ್ರಮಣಕಾರರ ರಾಜಕೀಯ ಮೇರೆಯಿಂದ ಸ್ತ್ರೀಯ ಹಕ್ಕುಗಳಿಗೆ ಚ್ಯುತಿ ಉಂಟು ಮಾಡುತ್ತಿದ್ದಾರೆ.''[೬]

ಒಟ್ಟಿನಲ್ಲಿ ಮೂಲಭೂತವಾದಿಗಳು ಬುರ್ಖಾದಂತಹ ಸಂಹಿತೆಗಳನ್ನು ಜಾರಿಗೊಳಿಸುವುದರ ಮೂಲಕ ಮಹಿಳೆಯರ ಮಧ್ಯದ ಒಗ್ಗಟ್ಟನ್ನು ಒಡೆದು, ಅವರ ಚಲನ ಶೀಲತೆ ಮತ್ತು ಅಭಿವೃದ್ಧಿಯನ್ನು ನಿಯಂತ್ರಿಸಿ ಬುರ್ಖಾದ ತೆರೆಯಲ್ಲಿಯೇ ಮರೆಯಾಗಿ ಉಳಿಯುವಂತೆ ಮಾಡುವ ಹುನ್ನಾರವನ್ನು ಅಲ್ಲಗಳೆಯುವಂತಿಲ್ಲ.

ಧಾರ್ಮಿಕ ಮೂಲಭುತವಾದಿಗಳು ಧರ್ಮ, ಸಂಸ್ಕೃತಿಯ ಹೆಸರಿನಲ್ಲಿ, ಕೌಟುಂಬಿಕ ಮೌಲ್ಯಗಳ ಹೆಸರಿನಲ್ಲಿ ಆಕ್ರಮಣಕಾರ ಭಯೋತ್ಪಾದನೆಯನ್ನು ರಾಜಕೀಯರದ ಮರೆಯಿಂದ ಸ್ತ್ರೀ ಹಕ್ಕುಗಳ ಮೇಲೆ ದಾಳಿ ನಡೆಸುತ್ತಿದ್ದಾರೆ. ಮಹಿಳೆಯರನ್ನು ಸಂಪ್ರದಾಯಿಕವಾಗಿ, ಭಾವನಾತ್ಮಕವಾಗಿ, ಉದ್ರೇಕಿಸುವ ಪ್ರಯತ್ನ ನಡೆದಿದೆ.

ಕ್ಷೇತ್ರಕಾರ್ಯದ ಸಂದರ್ಭವೊಂದರಲ್ಲಿ, ಹೊಸಪೇಟೆಯ ಎಸ್.ಆರ್. ನಗರದ ಬಿ.ಕಾಂ. ಪದವಿಧರರಾದ ಉಮರ್ ಖಾನ್ ಪರದಾ ಪದ್ಧತಿಯ ಬಗೆಗೆ (ಬುರ್ಕಾ) ಹೀಗೆ ಸಮರ್ಥಿಸಿಕೊಂಡಿದ್ದಾರೆ. ಮಹಿಳೆಯ ಉಗುರು ಸಹ ಕಾಣಿಸಬಾರದು. ಹಾಗೆ ತನ್ನ ದೇಹವನ್ನು ಸಂಪೂರ್ಣವಾಗಿ ಘೋಷಾ ಪದ್ಧತಿಯನ್ನು ಅನುಸರಿಸಬೇಕು. ಆದರೆ ಇಂದಿನ ದಿನಮಾನಗಳಲ್ಲಿ ಇದು ಒಂದು ಪ್ಯಾಶನ್ ಆಗಿದೆ. ಬುರ್ಕಾ ಧರಿಸುವುದರಿಂದ ಆಕೆಯ ಮೇಲೆ ಯಾವ ಪುರುಷನ ದೃಷ್ಟಿಯು ಬೀಳಬಾರದು. ಜೊತೆಗೆ ಆಕೆ ಮನೆಯಲ್ಲಿಯೇ ಇರಬೇಕಂತೆ, ಖುರಾನ್ ಓದುವುದು, ಕಲ್ಮಾ ಓದುವುದು ಶ್ರೇಷ್ಠತೆ ಎಂದು ಹೇಳಿದರು.

ಜೊತೆಗೆ ಒಂದು ವಿಚಾರ ವೇನೆಂದರೆ, ಬುರ್ಕಾ ಧರಿಸುವುದರಿಂದ ಆಕೆಯ ಮುಖದ ಕಾಂತಿಯು ಹೆಚ್ಚುತ್ತದೆ. ಪರ ಪುರುಷ, ಅಂದರೆ ಒಬ್ಬ ಬಿಕ್ಷುಕನನ್ನು ಆಕೆ ತನ್ನ ಕಣ್ಣೆತ್ತಿ ನೋಡಬಾರದು ಎಂದು ಹೇಳಿದರು. ಶಾಪಿಂಗ್‌ಗೆ ಬುರ್ಕಾ ಧರಿಸದೆ ಹೋಗಬಾರದಂತೆ.

ನಾಚಿಕೆ ಲಜ್ಜೆ ಮತ್ತು ಶಿಷ್ಟಾಚಾರಗಳು ಮಾನವನ ಸಹಜ ಪ್ರಕೃತಿಯಲ್ಲಿ ರುವಂತಹ ಗುಣಗಳಾಗಿವೆ. ಆದುದರಿಂದಲೇ ಅನಾಗರಿಕ ಕಾಲದಿಂದಲೇ ಸ್ತ್ರೀ ಪುರುಷರು ತಮ್ಮ ಗುಪ್ತಾಂಗಗಳನ್ನು ಮುಚ್ಚುವ ಒಂದಲ್ಲ ಒಂದು ವಿಧಾನವನ್ನು ಅನುಸರಿಸುತ್ತಾ ಬರುತ್ತಿದ್ದಾರೆ. ಇದು ಮಾನವನನ್ನು ಪ್ರಾಣಿಗಳಿಂದ ಬೇರ್ಪಡಿಸುವ ಒಂದು ಪ್ರಧಾನ ಮಾಧ್ಯಮ. ಸೃಷ್ಟಿಕರ್ತನು ಮನುಷ್ಯನಿಗೆ ನೀಡಿರುವ ಈ ಲಜ್ಜೆ ಮತ್ತು ನಾಚಿಕೆ ಪ್ರಜ್ಞೆಯಿಂದಾಗಿಯೇ ಇತರ ಪ್ರಾಣಿಗಳಿಗೆ ವ್ಯತಿರಿಕ್ತವಾಗಿ ಮಾನವನು ತನ್ನ ಕಾಮಾಸಕ್ತಿಯ ಚಟುವಟಿಕೆಗಳನ್ನು ರಹಸ್ಯವಾಗಿಡಲು ನಿರ್ಬಂದಿತನಾಗುತ್ತಾನೆ. ಇತಿಹಾಸದುದ್ದಕ್ಕೂ ಮಧ್ಯೆ ಇದ್ದ ತಾತ್ವಿಕ, ಸೈದ್ಧಾಂತಿಕ, ಸಾಂಪ್ರದಾಯಿಕ ಮತ್ತು ಸಾಂಸ್ಕೃತಿಕ ಭಿನ್ನಾಭಿಪ್ರಾಯಗಳ ಹೊತಾಗಿಯೂ ವಸ್ತ್ರಧಾರಣೆ ಅನಿವಾರ್ಯವೆಂಬುದನ್ನು ಮಾನವ ಕುಲವು ಸರ್ವಾನು ಮತದಿಂದ ಅಂಗೀಕರಿಸಿದೆ.

ಇದೇ ರೀತಿ ಎಲ್ಲಾ ಮಾನವ ವರ್ಗಗಳೂ ವಸ್ತ್ರಧಾರಣೆಯ ನಿಟ್ಟಿನಲ್ಲಿ ಪುರುಷನಿಗಿಂತ ಸ್ತ್ರೀಯ ಹೊಣೆಗಾರಿಕೆ ಅಧಿಕವೆಂಬುದನ್ನು ಒಪ್ಪುತ್ತವೆ. ಸ್ತ್ರೀಯ ದೇಹ ರಚನೆಯಲ್ಲಿರುವ ವಿಶಿಷ್ಟ ಆಕರ್ಷಣೆಯು ಪುರುಷನಿಗಿಂತ ಎಷ್ಟೋ ಪಾಲು ಮಿಗಿಲಾಗಿರುವುದರಿಂದ ಸ್ತ್ರೀ ಪುರುಷರಿಬ್ಬರನ್ನೂ ಸೃಷ್ಟಿಸಿರುವ ಅಲ್ಲಾಹನು ಸ್ತ್ರೀಯಲ್ಲಿ ಪುರುಷನಿಗಿಂತ ಹೆಚ್ಚಿನ ಪ್ರಮಾಣದಲ್ಲಿ ಲಜ್ಜೆಯನ್ನು ಮೈಗೂಡಿಸಿರುವನು ಆದ್ದರಿಂದಲೇ ಇಸ್ಲಾಂನಲ್ಲಿ ಈ ಬಗ್ಗೆ ಸ್ಪಷ್ಟ ಮತ್ತು ಸಮಗ್ರ ಆದೇಶಗಳನ್ನು ನೀಡಲಾಗಿದೆ.

ಮಾನವ ಕುಲದ ಆರಂಭದಲ್ಲೇ ಮಾನವರಿಗೆ ಮೈ ಮುಚ್ಚಿಕೊಳ್ಳಬೇಕೆಂಬ ಆದೇಶವನ್ನು ನೀಡಲಾಗಿತ್ತೆಂದು ಪವಿತ್ರ ಕುರ್‌ಆನ್ ನ ಮೂಲಕ ತಿಳಿದು ಬರುತ್ತದೆ.

ಹೆಣ್ಣನ್ನು ಧರ್ಮಗಳು ಸಮಾಜದಲ್ಲಿ ಕನಿಷ್ಟವಾಗಿ ತೋರಿಸಿವೆ. ತನ್ನ ಧರ್ಮದ ಹೆಣ್ಣು ದೇಹವನ್ನು ಇನ್ನೊಂದು ಧರ್ಮಿಯ ಪುರುಷರು ನೋಡಬಾರದು, ಎಂಬ ಸ್ವಾರ್ಥ ಗಂಡಸಿನ ಮನಸ್ಸಿಗೆ ಬಹಳ ದೊಡ್ಡ ಸಾಕ್ಷಿ. ಹೆಣ್ಣುಗಳ ಮೇಲಿನ ಒಡೆತನದ ಸ್ವಭಾವದಿಂದ ಬಂದ ನಡತೆ ಭಯಾನಕವಾಗಿದೆ. ಹೆಣ್ಣನ್ನು ಸುಂದರವಾದ ಉಡುಪುಗಳಿಂದ ಮುಚ್ಚುವುದು, ಬುರ್ಖಾ ಹಾಕಿ ಬಂಧಿಸುವುದು ಒಡವೆಗಳಿಂದ ಅಲಂಕರಿಸಿ ಅದರಿಂದಲೇ ಮರೆಮಾಚಿಸುವುದೆಲ್ಲವು

ಸಾಮಾಜಿಕವಾಗಿ ಹೆಣ್ಣಿನ ದೇಹವನ್ನು ಬಚ್ಚಿಟ್ಟು ಆಕೆಗೆ ಸಾರ್ವಜನಿಕ ವ್ಯಕ್ತಿತ್ವವೇ ಇಲ್ಲದಂತೆ ಮಾಡುವ ಹುನ್ನಾರ ಇಂತಹ ಕ್ರಮಗಳಲ್ಲಿ ಇರುತ್ತದೆ. ವಿಧವೆಯಾದ ಹೆಂಗಸು ಕತ್ತಲೆ ಮೂಲೆಯಲ್ಲಿ ಬಿದ್ದಿರಬೇಕೆಂಬುದು ಕೂಡ ಪುರುಷನ ವಿಕೃತ ನಿಯಮವೆ ಆಗಿದೆ.

ಹೆಣ್ಣು ಮೈತುಂಬ ಸೆರಗು ಹಾಕಿ ತಲೆ ಮೇಲೂ ಸೆರಗು ಹಾಕಿಕೊಂಡು ಹೋಗಬೇಕು ಎಂಬ ಪುರುಷನ ಮನಸ್ಸಿನಲ್ಲಿ ಹೆಣ್ಣಿನ ಮಾನರಕ್ಷಣೆಯ ಉದ್ದೇಶಕ್ಕಿಂತ ಆಕೆಯ ದೇಹವನ್ನು ಮತ್ಯಾರು ನೋಡಬಾರದು ಎಂಬುದೇ ಮುಖ್ಯವಾಗಿದೆ.

**೩.೪. ವಸ್ತ್ರಧಾರಣೆಯ ನಿಯಮಗಳು**

ಬೇರಾವ ನಾಗರಿಕತೆಯೂ ಮಾನವನು ತನ್ನ ಗುಪ್ತಾಂಗಗಳನ್ನು ಮುಚ್ಚಿಕೊಂಡಿರಬೇಕೆಂದು ಕಾನೂನು ಮೂಲಕ ಸ್ಪಷ್ಟಪಡಿಸದೆ ಇದ್ದಾಗಲೂ ತಾನು ಅದನ್ನು ಕಡ್ಡಾಯ ಗೊಳಿಸುವ ಮೂಲಕ ಇಸ್ಲಾಂ ಮಾನವ ಸಹಜ ಲಜ್ಜೆಗೆ ಮಾನ್ಯತೆ ನೀಡಿದೆ. ಅಂಗಾಂಗ ಪ್ರರ್ಶನವನ್ನು ನಾಗರಿಕತೆಯ ಪ್ರತೀಕವೆಂದು ಪರಿಗಣಿಸುವ ಆಧುನಿಕತೆಯು ಮಾನವನನ್ನು ಈ ನಿಸರ್ಗ ಸಹಜ ಲಜ್ಜೆಯಿಂದ ಮುಕ್ತಗೊಳಿಸಿ, ಪೂರ್ಣ ನಗ್ನತೆಯತ್ತ ಒಯ್ಯುತ್ತಿದೆ. ಬಟ್ಟೆ ತೊಡುವುದು ಅಲಂಕಾರಕ್ಕಾಗಿಯೇ ಹೊರತು ನಗ್ನತೆಯನ್ನು ಮುಚ್ಚಲಿಕ್ಕಲ್ಲ ಎಂಬುದು ಅದರ ಧಾರಣೆಯಾಗಿದೆ. ಆದರೆ ಇಸ್ಲಾಂನ ದೃಷ್ಟಿಯಲ್ಲಿ ಅಲಂಕಾರಕ್ಕಿಂತಲೂ ಹೆಚ್ಚಿನ ಮಹತ್ವ ನಗ್ನತೆಯನ್ನು ಮರೆಸುವುದಕ್ಕಿದೆ. ಸ್ತ್ರೀಯರನ್ನು ಆಕರ್ಷಿಸಬಹುದಾದ ಪುರುಷರ ಅಂಗಾಂಗಗಳನ್ನು ಪುರುಷರಲ್ಲಿ ಚಿತ್ತ ಚಾಂಚಲ್ಯವನ್ನುಂಟು ಮಾಡಬಲ್ಲ ಸ್ತ್ರೀಯರ ಅಂಗಾಂಗಳನ್ನು ಮುಚ್ಚಲೇ ಬೇಕೆಂದು ಇಸ್ಲಾಂ ತನ್ನ ಅನುಯಾಯಿಗಳಿಗೆ ಕಡ್ಡಾಯಗೊಳಿಸಿದೆ.

''ಸ್ತ್ರೀಯರು ಕಡ್ಡಾಯವಾಗಿ ಮುಚ್ಚಿಕೊಳ್ಳಲೇ ಬೇಕಾದ ಅಂಗಾಂಗಗಳ ವಿವರಗಳನ್ನು ಇಸ್ಲಾಂ ಸ್ಪಷ್ಟವಾಗಿ ನೀಡಿದೆ. ಸ್ತ್ರೀ ಮುಖಲಮತ್ತು ಅಂಗೈಗಳನ್ನು ಹೊರತು ಪಡಿಸಿ ತನ್ನ ಸಂಪೂರ್ಣ ದೇಹವನ್ನು ಮುಚ್ಚಿಕೊಳ್ಳಬೇಕು. ಅದನ್ನು ಆಕೆ ತನ್ನ ಗಂಡನ ಹೊರತು ಇತರ ಯಾರಿಗೂ ಕಾಣದಂತೆ ಮುಚ್ಚಕೊಂಡಿರಬೇಕು. ಈ ನಿಯಮಗಳು ಸ್ತ್ರೀಯು ಪ್ರಬುದ್ಧಳಾದಂದಿನಿಂದ (ಋತುಮತಿಯಾದಂದಿನಿಂದ) ಆಕೆ ಲೈಂಗಿಕ ಆಕರ್ಷಣೆ ಕಳೆದುಕೊಳ್ಳುವ ಮುದಿ ಪ್ರಾಯಕ್ಕೆ ತಲುಪುವ ತನಕ ಕಡ್ಡಾಯವಾಗಿದೆ.''[೮]

''ವಿವಾಹ ನಿಷಿದ್ಧ ಸಂಬಂಧಿಗಳೆನಿಸಿದ ಸ್ತ್ರೀಯರು ಪುರುಷರ ಜೊತೆ ಹೇಗೆ ವ್ಯವಹರಿಸಬೇಕು ಮತ್ತು ಇತರ ಪುರುಷರೊಂದಿಗೆ ಹೇಗೆ ನಡೆದುಕೊಳ್ಳಬೇಕೆಂಬ ನಿಯಮಗಳ ಸಮಾಹಾರವನ್ನೇ ಪರ್ದಾ ಅಥವಾ ಹಿಜಾಬ್ ಎನ್ನುತ್ತಾರೆ.''[೯]

**೩.೫. ನಂಬಿಕೆಗಳು**

ಮಾನವನ ಬದುಕಿನಲ್ಲಿ ನಂಬಿಕೆಗಳು ಬಹಳ ಮುಖ್ಯ ಸ್ಥಾನ ಪಡೆದುಕೊಂಡಿದೆ. ನಂಬಿಕೆಗಳು ಮಾನವರ ಬದುಕನ್ನು ನಿಯಂತ್ರಿಸುವ ಹಾಗೂ ನಿರ್ದೇಶಿಸುವ ಪ್ರಮುಖ ಶಕ್ತಿಯಾಗಿ. ಜೀವನಾಡಿಯಾಗಿ ಸಂಸ್ಕೃತಿಯ ಭಾಗವಾಗಿದೆ. ವ್ಯಕ್ತಿ ಮತ್ತು ಸಮಾಜದ ಮೇಲೆ ಪ್ರಭಾವ ಬೀರುವ ನಂಬಿಕೆಗಳು ಒಂದು ದೃಷ್ಟಿಯಲ್ಲಿ ಸಮಾಜದಲ್ಲಿ ಕಂಡು ಬರುವ ಧ್ಯೇಯ ಧೋರಣೆಗಳ ಅವಿಭಾಜ್ಯ ಅಂಗವಾಗಿವೆ.

ವ್ಯಕ್ತಿಯಲ್ಲಿ ಅಂತರ್ಗತವಾಗಿರುವ ಅಗತ್ಯ ಆಶಯಗಳು ಹಾಗೂ ನಂಬುವ ಇಚ್ಛೆ ಪ್ರಬಲವಾಗಿದ್ದರೆ, ನಂಬಿಕೆಗಳ ಬೆಳವಣಿಗೆಗೆ ಕಾರಣವಾಗುತ್ತದೆ. ಒಟ್ಟಿನಲ್ಲಿ ಯಾವುದಾದರೂ ಹೇಳಿಕೆಗಳು ಹಾಗೂ ಸಂದರ್ಭವನ್ನು ನಿಜವೆಂದು ಭಾವಿಸಿ ಸ್ವೀಕರಿಸುವುದು ನಂಬಿಕೆ ಎನಿಸುತ್ತದೆ. ನಾವು ಸಮಾಜದಲ್ಲಿ ಪ್ರಚಲಿತವಾಗಿ ಇವುಗಳ ಸ್ವೀಕಾರ ಹಾಗೂ ಆಚರಣೆಯಲ್ಲಿ ವ್ಯತ್ಯಾಸ ಕಂಡು ಬರುತ್ತದೆ.

ಮಾನವನ ಬದುಕಿನಲ್ಲಿ ಹಾಸು ಹೊಕ್ಕಾಗಿರುವ ನಂಬಿಕೆಗಳು ಒಂದಲ್ಲ ಒಂದು ವಿಧದಲ್ಲಿ ಅಭಿವ್ಯಕ್ತಗೊಳ್ಳುತ್ತದೆ. ಈ ನಂಬಿಕೆಗಳು ಗ್ರಾಮೀಣ ಜನರಿಗೆ ಮಾತ್ರ ಸೀಮಿತವಾಗಿರದೆ, ನಗರ ವಾಸಿಗಳಲ್ಲಿಯೂ ಕಂಡು ಬರುತ್ತದೆ. ಅಂದರೆ ನಂಬಿಕೆಗಳಿಲ್ಲದ ದೇಶವಾಗಲಿ, ಜನರಾಗಲಿ ಇಲ್ಲ, ಬಾಳಿಗೊಂದು ನಂಬಿಕೆ ಅಗತ್ಯ.

ಭಾರತೀಯ ಸಂಸ್ಕೃತಿಯೊಂದಿಗೆ ಬದುಕುತ್ತಿರುವ ಮುಸ್ಲಿಂ ಸಮುದಾಯ ಅಥವಾ ಮುಸ್ಲಿಂ ಮಹಿಳೆಯರಲ್ಲಿ ಸ್ಥಳೀಯ ಪರಿಸರಕ್ಕನುಗುಣವಾಗಿ ಪದ್ಧತಿಗಳು, ಆಚರಣೆಗಳು, ನಂಬಿಕೆಗಳು ಕಂಡುಬರುತ್ತವೆ. ನಂಬಿಕೆಗಳು ವೈಯುಕ್ತಿಕ ಹಾಗೂ ಸಾಮಾಜಿಕ ಜೀವನದ ಮೇಲೆ ಒಳ್ಳೆಯ ಹಾಗೂ ಕೆಟ್ಟ ಪ್ರಭಾವ ಬೀರಬಹುದು.

ಇಂತಹ ನಂಬಿಕೆಗಳು ಸಾಮಾನ್ಯವಾಗಿ ಎಲ್ಲಾ ಧರ್ಮಗಳಲ್ಲಿರುವಂತೆ ಹಾಗೂ ಅವೆಲ್ಲವೂಗಳೂ ಗರಿಷ್ಠ ಮಟ್ಟದಲ್ಲಿ ಮಹಿಳೆಯರನ್ನು ಅವಲಂಬಿಸಿ, ಉದ್ದೇಶಿಸಿ ರಚಿಸಲ್ಪಟ್ಟವುಗಳಾಗಿವೆ. ನನ್ನ ಅಧ್ಯಯನಕ್ಕೆ ಪೂರಕವಾಗಿ ಮುಸ್ಲಿಂ ಮಹಿಳೆಯ ಜೀವನದಲ್ಲಿ ನಂಬಿಕೆಗಳು, ಯಾವ ಮಟ್ಟದಲ್ಲಿ ಆಕೆಯ ಸಾಮಾಜಿಕ ಚಹರೆಯ ಮೇಲೆ ಪರಿಣಾಮ ಬೀರುತ್ತವೆ ಎಂದು ತಿಳಿಯಲಾಗಿದೆ.

೧. ಶುಭಕಾರ್ಯ ಅಥವಾ ಹೆಣ್ಣು ನೋಡಲು ಹೊರಡುವಾಗ ವಿಧವೆ ಕಾಣಿಸಿಕೊಳ್ಳಬಾದು. ಹಾಗೆಯೇ ಬೆಕ್ಕು ಅಡ್ಡ ಬರಬಾರದು, ಗುದ್ದಲಿ, ಹಿಡ್ಲು, ಬಾಂಡಲಿ, ಖಾಲಿ ಬಿಂದಿಗೆ ಮೊದಲಾದವು ಕಾಣಿಸಿಕೊಳ್ಳಬಾರದು. ಹೀಗೆ ಕಾಣಿಸಕೊಂಡರೆ ಹೋಗುವ ಕಾರ್ಯ ಸಫಲ ವಾಗುವುದಿಲ್ಲವೆಂದೂ ಇವೆಲ್ಲವೂ ಕೆಟ್ಟಶಕುನವೆಂದೂ ನಂಬಲಾಗಿದೆ.

ಅಂದರೆ ಇಲ್ಲಿ ವಿಧವಾ ಸ್ತ್ರೀ ಯು ಒಂದು ವಿಘ್ನದಂತೆ ಅಥವಾ ಅಪಶಕುನವೆಂದು ಹಿಯ್ಯಾಳಿಸಿ ಆಕೆಯನ್ನು ಶಾಶ್ವತವಾಗಿ ಕತ್ತಲೆಯ ರೂಪಕ್ಕೆ ತಳುವಂತಹ ನಂಬಿಕೆ, ಆಚರಣೆಗಳು ಅರ್ಥಹೀನವಾದವು.

ಇನ್ನು ಕೆಲವು ನಂಬಿಕೆಗಳು ವ್ಯಕ್ತಿ ಅಥವಾ ಸಮಾಜದ ಧಾರುಣ ದುಃಖಕ್ಕೆ ಕಾರಣವಾಗಬಹುದು. ಅಂದರೆ ಸೊಸೆ ಬಂದ ವರ್ಷದೊಳಗೆ ಮನೆಯಲ್ಲೇನಾದರೂ ಅನಾಹುತವಾದರೆ, ಅಥವಾ ಯಾರಾದರೂ ಸತ್ತರೆ ಸೊಸೆಯ ಕಾಲುಗುಣ ಕೆಟ್ಟದ್ದು ಎಂದು ಭಾವಿಸಿ. ಆಕೆಗೆ ಅನೇಕ ತೊಂದರೆ ಕೊಡುವುದದು ಸರ್ವೇಸಾಮಾನ್ಯ. ಹಾಗೆಯೇ ಮಗು ಹುಟ್ಟುವುದಕ್ಕಿಂತ ಮೊದಲು ಅಥವಾ ಅನಂತರ ಮೇಲಿನಂತೆಯೇ ಅನಾಹುತವಾದರೆ, ಅಥವಾ ಸತ್ತರೆ, ಹುಟ್ಟಲಿರುವ ಅಥವಾ ಹುಟ್ಟಿದ ಮಗುವಿನ ಕಾಲುಗುಣ ಒಳ್ಳೆಯದಲ್ಲ, ಅದರಲ್ಲೂ ಆ ಮಗು ಹೆಣ್ಣು ಮಗುವಾಗಿದ್ದೆ, ಅದನ್ನು ತುಂಬಾ ನಿಂದಿಸುತ್ತಾರೆ.

''ಹುಟ್ಟು ಹುಟ್ಟುತಾ ಮಕ್ಕಳ ಪುಣ್ಯ, ಬರ್ತಾ ಬರ್ತಾ ಸೊಸೆ ಪುಣ್ಯ ಎಂದು ಇದಕ್ಕೆ ಸಂಬಂಧ ಪಟ್ಟಂತೆ ನಮ್ಮ ಜನಪದರ ಬಾಯಲ್ಲಿ ಗಾದೆಯ ಮಾತು ಪ್ರಚಲಿತವಾಗಿ ಇದೆ. ಇದು ಎಷ್ಟು, ಸತ್ಯವೋ, ಎಷ್ಟುಸುಳ್ಳೋ, ಒಟ್ಟಿನಲ್ಲಿ

ಎಷ್ಮೆಗೆ ಜ್ವರ ಬಂದರೆ ಎತ್ತಿಗೆ ಬರೆ ಎಳೆಯುವಂತೆ, ಏನೋ ಕಾರಣಕ್ಕೆ ಯಾವುದೇ ಸಂಬಂಧ ಕಲ್ಪಿಸಿ ತಮ್ಮ ಮನಶಾಂತಿ ಕಳೆದುಕೊಳ್ಳುತ್ತಾರೆ. ವಿಧವೆಯ ಕೈಯಿಂದ ಯಾವ ಶುಭಕಾರ್ಯವನ್ನು ಮಾಡಿಸುವುದಿಲ್ಲ. ಹಾಗೆ ಮಾಡಿಸುವುದು ಅಮಂಗಲ ಎಂದು ಭಾವಿಸುತ್ತಾರೆ."[೦೦]

(ಈ ಭಾವನೆಯೂ ಇತರ ಯಾವುದೇ ಧರ್ಮಗಳಿಗೂ ಹೊರತಾಗಿಲ್ಲ)

**೩.೬. ಮುಸ್ಲಿಂ ಮಹಿಳೆಯ ಸಂಪ್ರದಾಯಗಳು**

ಆಚರಣೆ ಮತ್ತು ನಂಬಿಕೆಗಳ ಮೊತ್ತವನ್ನು ಸಂಪ್ರದಾಯವೆಂದು ಹೇಳಲಾಗುತ್ತದೆ. ಮುಸ್ಲಿಂ ಹೆಣ್ಣಿನ ಬಗ್ಗೆ ಇರುವ ನಂಬಿಕೆಗಳು, ಆಕೆಯನ್ನು ಆಚರಣೆಗಳಲ್ಲಿ ತೊಡಗುವಂತೆ ಪ್ರೋತ್ಸಾಹಿಸುತ್ತವೆ. ಆಕೆ ಪಡೆಯಬೇಕಾದ ಸ್ಥಾನಕ್ಕಾಗಿ, ಅದರ ಔನ್ನತ್ಯವನ್ನು ರಕ್ಷಿಸಿಕೊಳ್ಳುವ ಕಾರಣಕ್ಕಾಗಿ ಆಕೆ ನಿರಂತರವಾಗಿ ಒಂದಲ್ಲ ಒಂದು ಆಚರಣೆಯಲ್ಲಿ ಭಾಗಿಯಾಗಬೇಕೆಂಬ ಸಮಾಜದ ಒತ್ತಡ, ಅವಳ ಜೀವನ ಕ್ರಮದ ಅಭದ್ರತೆಯಿಂದ ಹುಟ್ಟಿಸಿದೆ. ಪಿತೃಪ್ರಧಾನ ವ್ಯವಸ್ಥೆಯಲ್ಲಿ ಪ್ರತಿ ಸಂದರ್ಭದಲ್ಲೂ ಹೆಣ್ಣಿನ ಸ್ಥಾನ ನಿರ್ಣಯವಾಗುವುದು. ಪುರುಷನ ಮೂಲಕವೇ ಆಗಿರುತ್ತದೆ. ಈ ಕಾರಣಕ್ಕಾಗಿ ಪುರುಷನ ಸಂರಕ್ಷಣೆಯೂ ಹೆಣ್ಣಿನ ಜವಾಬ್ದಾರಿಯಾಗಿ ಸಂಸ್ಕೃತಿಕರಣದ ಪ್ರಕ್ರಿಯೆಯಲ್ಲಿ ಉಳಿದು ಬೆಳೆದು ಬಂದಿರುವ ನಂಬಿಕೆಯಾಗಿದೆ. ಇದೇ ನಂಬಿಕೆ ಹಲವಾರು (ವ್ರತ) ಹಬ್ಬಗಳ ಹಿಂದೆ ಕೆಲಸ ಮಾಡುವುದನ್ನು ನಾವು ತಿಳಿಯಬಹುದು. ಸಾಂಪ್ರದಾಯಿಕ ನಂಬಿಕೆಗಳು, ನೀತಿ-ನಿಯಮಗಳು ಹೆಣ್ಣಿನ ಗೃಹವಾರ್ತೆಯನ್ನೂ ಎತ್ತಿ ಹಿಡಿದು ಮತ್ತು ಪ್ರಮುಖವೆಂದು ಪರಿಗಣಿಸಿವೆ. ಪುರುಷ ಮಹಿಳೆಯನ್ನೂ ಕೇವಲ ಗೃಹವಾರ್ತೆಗಾಗಿ, ಸಂತಾನೋತ್ಪತ್ತಿಗಾಗಿ, ಭೋಗದ ವಸ್ತುವಾಗಿ ಮಾತ್ರ ಪರಿಗಣಿಸಿದ್ದಾನೆ.

ಮುಸ್ಲಿಂ ಮಹಿಳೆಯರು ಸಹ ಮನೆಯಲ್ಲಿ ನಿರ್ವಹಿಸುವ ದುಡಿಮೆಗೆ ಮಹತ್ವ ನೀಡಿಲ್ಲ. ಹೀಗಾಗಿ ಈ ಮಹಿಳೆಯರ ಕೆಲಸಗಳು ದುಡಿಮೆ ಎನಿಸಿಕೊಳುತ್ತಿಲ್ಲ. ಮಹಿಳೆಯರ ಪಾತ್ರಕ್ಕೆ ಮಹತ್ವ ನೀಡಿಲ್ಲ. ಹೀಗಾಗಿ ಮಹಿಳೆಯರ ಕೆಲಸಗಳು ದುಡಿಮೆ ಎನಿಸಿಕೊಳ್ಳುತ್ತಿಲ್ಲ. ಮಹಿಳೆಯರ ಪಾತ್ರಕ್ಕೆ ಮಹತ್ವ ಬರುತ್ತಿಲ್ಲ. ಮನೆಯ ಸದಸ್ಯರ ಬೇಕು ಬೇಡಗಳನ್ನು ಪೂರೈಸಿ ಅದನ್ನು ಸಂತೋಷವಾಗಿಡುವುದು. ತಾನು ಮಾತ್ರ, ಬಾಹ್ಯ ಪ್ರಪಂಚಕ್ಕೆ ಕಾಲಿರಿಸದೆ, ನಾಲ್ಕು ಗೋಡೆಗಳ ಮಧ್ಯೆ ಇರಬೇಕು ದುಡಿದು ತಂದು ಹಾಕುವ ನೆಪದಲ್ಲಿ, ತನ್ನ ಕರ್ತವ್ಯದಿಂದ ವಿಮುಖನಾಗಿ, ಮಹಿಳೆಗೆ ಕರ್ತವ್ಯವನ್ನಾಗಿಸಿ, ಈ ಜವಾಬ್ದಾರಿಗಳೆಲ್ಲವೂ ಅವಳ ಹೆಗಲ ಮೇಲೆಯೇ ಹೇರಲಾಗಿದೆ. ಹೀಗಿರುವಾಗ ಅವಳು ಪರ್ಯಾಯ ಮಾರ್ಗಗಳನ್ನು ಹುಡುಕುವಂತೆಯೇ ಇಲ್ಲವೆಂಬುದು ಇಲ್ಲಿ ಗಮನಾರ್ಹ ವಿಷಯವಾಗಿದೆ. ಸಂಪೂರ್ಣ ಗೃಹಿಣಿತ್ವವನ್ನು ನಿಭಾಯಿಸುವುದರಲ್ಲಿಯೇ ಆಕೆಯ ಸಾರ್ಥಕತೆ ಇದೆ. ಕೇವಲ ಗಂಡನಿಗೆ ಸೀಮಿತವಾಗಿರುವ ಆಕೆಯ ಜೀವನ ವ್ಯಾಪ್ತಿಯು ಬಹು ಸಂಕುಚಿತವೆಂದು ಪದವಿಧರ ವಕ್ಕ ಉಮರ್ ಖಾನ್ ತಿಳಿಸಿದಾಗ ಅವರ ಮನೆಯನ್ನು ಉದಾಹರಿಸುವುದರೊಂದಿಗೆ ಇಡೀ ಮುಸ್ಲಿಂ ಸಮುದಾಯ ಹೀಗೆಯೇ ಇರಬೇಕೆಂದು ಹೇಳುತ್ತಾರೆ.

ಹೆಣ್ಣಿನ ದೇಹ ಅಪವಿತ್ರವೆಂಬ ನಂಬಿಕೆ ಇರುವುದರಿಂದ ಹೆಣ್ಣಿಗೆ ಪ್ರತಿಯೊಂದು ವಿಷಯದಲ್ಲಿಯೂ ನಿಷೇಧವನ್ನು ಹೇರಲಾಗಿದೆ. ಹೆಣ್ಣಿನ ಜೈವಿಕತೆ ನಿಸರ್ಗ ನಿರ್ಮಿತವಾಗಿದ್ದರೂ ಕೂಡ ಅವಳನ್ನು ಅಸ್ಪೃಶ್ಯಳಲ್ಲಿ,

ಅಸ್ಪೃಶ್ಯಳಂತೆ ಅದೃಶ್ಯ ಮಾಡಲಾಗಿದೆ. ಪ್ರತಿಯೊಂದು ಧರ್ಮವು, ಕೂಡ ಅವರದೇ ಆದ ಸಂಪ್ರದಯಾ ಆಚರಣೆಗಳು. ನಂಬಿಕೆಗಳನ್ನು ಒಳಗೊಂಡಿರುತ್ತದೆ. ಅದು ಅವರ ಧರ್ಮದ ಶ್ರೇಷ್ಠತೆಯನ್ನು ಬಿಂಬಿಸುತ್ತದೆ. ಎಂಬುದು ಧರ್ಮದ ಅನುಯಾಯಿಗಳ ನಂಬಿಕೆಯಾಗಿದೆ. ಈ ನಂಬಿಕೆಗಳು ಹೀಗೆ ಸೃಷ್ಠಿಯಾದವು, ಅವುಗಳ ಸೃಷ್ಠಿಗೆ ಕಾರಣಗಳೇನು ಎಂಬುದನ್ನು ಮೊದಲು ಅರಿಯುವುದು ಮೌಲ್ಯವಾಗಿದೆ.

ಧಾರ್ಮಿಕ ಆಚರಣೆಗಳು, ಸಂಪ್ರದಾಯಗಳು ಮತ್ತು ನಂಬಿಕೆಗಳು ನಮ್ಮ ಮುಸ್ಲಿಂ ಸಮಾಜ, ಕುಟುಂಬಗಳಲ್ಲಿ ಹೇಗೆ ಹಾಸುಹೊಕ್ಕಾಗಿವೆ ಎಂದರೆ ಹೆಣ್ಣು ಜೋರಾಗಿ ನಗುವುದು, ಹೊರಗಡೆ ನಿಲ್ಲುವುದು, ಓಡಾಡುವುದರ, ಪುರುಷರೊಂದಿಗೆ ಮಾತಾನಾಡುವುದು, ಬುರ್ಖಾ ಧರಿಸದೆ ಹೊರಹೋಗುವುದು, ಇವೆಲ್ಲವೂ ನಿಷಿದ್ಧ. ಮುಸ್ಲಿಂ ಧರ್ಮ ರೂಪಿಸಿದ ನಂಬಿಕೆಗಳಿಗೆ ಮತ್ತು ಸಂ್ರದಾಯಗಳಿಗೆ ಮುಸ್ಲಿಂ ಮಹಿಳೆ ತಲೆಬಾಗಲೇಬೇಕಾಗಿದೆ.

ಒಂದು ವೇಳೆ ಮುಸ್ಲಿಂ ಮಹಿಳೆಯ ಯಾವುದೇ ಸಂಪ್ರದಾಯ ಆಚರಣೆಗಳಿಂದಾಗಲಿ, ಉಡುಪು ಸಂಹಿತೆಯಿಂದಾಗಲಿ ವಿಮುಖಳಾದರೆ, ತನ್ನ ಜವಾಬ್ಧಾರಿಗಳನ್ನೂ, ನಿರ್ಬಂಧನೆಗಳನ್ನೂ, ನೆನಪಿಸಿಕೊಳ್ಳುವ ಸರ್ವಪ್ರಯತ್ನವಿರುತ್ತದೆ. ಅವಳ ಮಧ್ಯಸ್ಥಿಕೆಯಿಂದ ತಾನೂ ರೂಪಿಸಿರುವಂತಹ ಮೌಲ್ಯಗಳಿಗೆ ಧಕ್ಕೆ ಬರದಂತೆ, ಒಪ್ಪಿಕೊಂಡು ಮುಂದುವರೆಯುವಂತೆ ಇರುತ್ತವೆ ಎಂದು ತಿಳಿಸುತ್ತಾರೆ. ವಕ್ಫ ಶೌಕತ್ ಅಲಿ.

ಪುರುಷ ಪ್ರಧಾನ ವ್ಯವಸ್ಥೆಯು ಕಟ್ಟಿಕೊಟ್ಟಿರುವಂತಹ ಸಂಪ್ರದಾಯ, ನಂಬಿಕೆ ಆಚರಣೆಗಳೆಂಬ ಸಾಮಾಜಿಕ ಮೌಲ್ಯಗಳು ಮಹಿಳೆಯನ್ನೂ ಸದಾ ಆಳುತ್ತಲೇ ಇವೆ. ಚಾರಿತ್ರಿಕ ಸಾಮಾಜಿಕ ಹಿನ್ನೆಲೆಯನ್ನೂ ಗಮನಿಸಿದಾಗ ಮಹಿಳೆ ಪ್ರತಿಯೊಂದರ ಹಂತದಲ್ಲಿಯೂ ಈ ಮೌಲ್ಯಗಳನ್ನು ಒಪ್ಪಿಕೊಳ್ಳುತ್ತಲೇ ಬರುವಂತೆ ಬೇಡಿದ್ದಾರೆ. ಇಂದಿಗೂ ಕೂಡ ಈ ಸಂಪ್ರದಾಯಗಳು ಹೆಣ್ಣಿನ ಮನೋಲೋಕದ ಮೇಲೆ ತನ್ನ ಸಂಪೂರ್ಣ ಅಧಿಪತ್ಯವನ್ನು ಸಾಧಿಸಿ ಕುಳಿತುಕೊಂಡಿವೆ.[೧೧]

ಈ ಸಂಪ್ರದಾಯಗಳು ಇಂದಿನ ಯುಗದಲ್ಲಿಯೂ ಕೂಡ ಒಬ್ಬ ಹೆಣ್ಣು ತನ್ನ ಗಂಡನ ಹೆಸರನ್ನೂ ಕೂಗಿ ಕರೆಯುವುದಿಲ್ಲ. ಗಂಡನ ಎಂಜಲು ತಟ್ಟೆಯಲ್ಲಿ ಊಟ ಮಾಡುವುದನ್ನೂ ಬಿಡುವುದಿಲ್ಲ. ಆಧುನಿಕತೆಯ ಪ್ರಭಾವಕ್ಕೆ ಒಳಗಾದ ಮೇಲ್ವರ್ಗದ ಮತ್ತು ಮೇಲ್ಜಾತಿಯ ಮಹಿಳೆಯರು ಇನ್ನೂ ಪೂರ್ವಗ್ರಹಪೀಡಿತರಾಗಿಯೇ ಇದ್ದಾರೆ. ಈ ಪೂರ್ವಗ್ರಹ ಪೀಡಿತ ಸಾಂಪ್ರದಾಯಿಕ ಮೌಲ್ಯಗಳು ಮುಸ್ಲಿಂ ಮಹಿಳೆಯ ಅಭಿವೃದ್ಧಿಗೆ ತೊಡಕಾಗುತ್ತವೆ. ಈ ವ್ಯವಸ್ಥೆ ಹಾಕಿಕೊಟ್ಟಿರುವಂತಹ ಚೌಕಟ್ಟಿನ ಎಲ್ಲೆಯನ್ನು ಮತ್ತು ತನ್ನ ಸೇವಾ ಕಾರ್ಯಗಳನ್ನು ಮೀರಿ ಬರದಂತೆ ಕಟ್ಟಿಹಾಕಿದೆ. ಬೇಗ ಕಟ್ಟುನಿಟ್ಟಿನ ಸಮುದಾಯದವರ ವಿಷಯಕ್ಕೆ ಬಂದಾಗ ಶಿಕ್ಷಣವಿಲ್ಲದೆ ಇರುವ, ನೈತಿಕತೆಯ ಗಂಧ ಗೊತ್ತಿರದ ಪುರುಷರು, ತೀರಾ ಆಕ್ರಮಣಕಾರಿಯಾದ ಸ್ಥಿತಿಯನ್ನು ಮಹಿಳೆಯ ಎದುರು ತಂದೊಡ್ಡಿದ್ದಾರೆ. ಈ ವ್ಯವಸ್ಥೆ ಹಾಕಿರುವ ಚೌಕಟ್ಟನ್ನು ಮೀರಿ ಬರದೇ ಮಹಿಳೆಯ ಅಭಿವೃದ್ಧಿ ಸಾಧ್ಯವಿಲ್ಲ. ಹೀಗಾಗಿ ಮೊದಲು ನಮ್ಮ ಸಮಾಜ ರೂಪಿಸಿರುವಂತಹ ಪೂರ್ವಾಗ್ರಹ ಪೀಡಿತ ಸಂಪ್ರದಾಯಗಳು, ಆಚರಣೆಗಳು ಆಕೆಯನ್ನು ಬಂಧ ಮುಕ್ತವನ್ನಾಗಿ ಮಾಡಬೇಕಾದ ಅಂದಾಗ ಮಾತ್ರ ಮಹಿಳೆಯರ ಅಭಿವೃದ್ಧಿ ಸಾಧ್ಯವಾಗುತ್ತದೆ.

ನೆಲೆಸಿದ ಪ್ರಾದೇಶಿಕತೆಗನುಗುಣವಾಗಿ ಮುಸ್ಲಿಂ ಮುತ್ತೈದೆ ಮಹಿಳೆಯರು ಕೈಗೆ ಬಳೆ, ಕಾಲಿಗೆ ಕಾಲುಂಗುರ, ಕುತ್ತಿಗೆಗೆ ಕರಿಮಣಿ ಸರ (ಲಚ್ಚ) ಹಾಕುತ್ತಾರೆ. ಇವು ಮುತ್ತೈದಿಯರ ಲಕ್ಷಣ, ಇವು ಮುತ್ತೈದಿಯರು ತೊಡದೆ ಇದ್ದರೆ, ಅಮಂಗಲ ಅಪಶಕುನ ಎಂದು ನಂಬಲಾಗಿದೆ. ಇದರಿಂದ ವಿಭಿನ್ನ ಸಂಸ್ಕೃತಿಗಳಲ್ಲಿ ಏಕತೆ ಗುರ್ತಿಸಲು ಸಾಧ್ಯ ಎಂದು ಸಂಶೋಧನೆಯ ಕ್ಷೇತ್ರಕಾರ್ಯದಲ್ಲಿ ಮೌಲ್ವಿಗಳೊಬ್ಬರು ಮುಸ್ಲಿಂ ನಂಬಿಕೆಗಳನ್ನು ಕುರಿತು ಹೀಗೆ ಹೇಳುತ್ತಾರೆ.

ಸ್ನಾನಮಾಡಿದ ಮೇಲೆ ಕೂದಲಿನ ನೀರು ಮನೆಯ ಒಳಗೆ ಹನಿಯಬಾರದು. ಹೊಸ್ತಿಲ ಮೇಲೆ ಒಂಟಿ ಕಾಲಿನಲ್ಲಿ ನಿಲ್ಲಬಾರದು, ಹೊಸ್ತಿಲ ಮೇಲೆ ಕುಳಿತು ಏನೂ ತಿನ್ನಬಾರದು, ಸೀನಬಾರದು, ಇದರಿಂದ ಮನೆಗೆ ದರಿದ್ರ ಬರುತ್ತದೆಂದೂ, ಮನೆಯ ಯಜಮಾನನಿಗೆ ಹಾನಿಯೆಂದೂ ನಂಬಲಾಗಿದೆ.

ಗರ್ಭಿಣಿಯರು, ಬಾಣಂತಿಯರು ಸಂಜೆಯ ಹೊತ್ತಿನಲ್ಲಿ ಮನೆಯ ಹೊರಗೆ ಹೋಗಬಾರದು ಎಂಬ ನಂಬಿಕೆ ಇದೆ. ಅತ್ಯಂತ ಸೂಕ್ಷ್ಮಾವಸ್ಥೆಯಲ್ಲಿರುವ ಈ ಸ್ಥಿತಿಯಲ್ಲಿ ಆರೋಗ್ಯಕ್ಕೆ ಹೆಚ್ಚಿನ ಗಮನ ಕೊಡುವುದರಿಂದ ಮನೆಯ ಹೊರಗೆ ಹೋಗಬಾರದೆಂಬ ನಂಬಿಕೆ ಬೆಳೆದಿರಬಹುದು.

ಕಷ್ಟಗಳ ನಿವಾರಣೆಗಾಗಿ ತಮ್ಮ ಬದುಕಿನಲ್ಲಿ ಹರಕೆ ಹೊರುವುದು, ಹರಕೆ ತೀರಿಸದಿದ್ದರೆ, ಸಂಕಷ್ಟಗಳು ಪುನಃ ಎದುರಾಗುತ್ತಾವೆಂದು ನಂಬುವುದು, ಹಬ್ಬ-ಹರಿದಿನಗಳಲ್ಲಿ, ಮುಟ್ಟು-ಮೈಲಿಗೆಯಾದವರು ಬರಬಾರದೆನ್ನುವುದು, ಇವೆಲ್ಲವೂ ಮಹಿಳೆಯರನ್ನು ಕುಟುಂಬದೊಳಗೆ ಪುರುಷನ ಮುಂದೆ ಅಸ್ಪೃಶ್ಯಳನ್ನಾಗಿ ಮಾಡುವಂತಹ ಪ್ರಯತ್ನಗಳು ಸಾಮಾನ್ಯವಾಗಿ ಎಲ್ಲಾ ಧರ್ಮೀಯರಲ್ಲೂ ನಿರಂತರವಾಗಿ ಹಿಂದಿನಿಂದಲೂ ನಡೆದುಕೊಂಡು ಬಂದಂತವುಗಳು ಎನ್ನಬಹುದು.

ಮುಸ್ಲಿಂರಲ್ಲಿ ಕೆಲವು ಧಾರ್ಮಿಕ ನಂಬಿಕೆಗಳು, ಕಂಡು ಬರುವುದು ಸಹಜ. ಪಶ್ಚಿಮ ದಿಕ್ಕಿನ ಕಡೆ ಕಾಲು ಚಾಚಿ ಮಲಗಬಾರದು. ಏಕೆಂದರೆ ಮೆಕ್ಕಾ ನಗರದಲ್ಲಿರುವ ಕಾಬಾ ಎಂಬ ಪ್ರಾರ್ಥನ ಮಂದಿರ ಪಶ್ಚಿಮ ದಿಕ್ಕಿನ ಕಡೆ ಇರುವುದರಿಂದ ಕಾಲು ಚಾಚಬಾರದೆಂದು ಮುಸ್ಲಿಂರು ನಂಬುತ್ತಾರೆ.

ಪುರುಷರು ಚಿನ್ನಾಭರಣ ಧರಿಸಬಾರದು. ಇಸ್ಲಾಂ ಧರ್ಮದಲ್ಲಿ ಪುರುಷನ ಚಿನ್ನಾಭರಣ ಧರಿಸುವುದು ನಿಷೇಧವಾದುದರಿಂದ ನಂಬಿಕೆಯ ರೀತಿಯಲ್ಲಿ ಬೆಳೆದು ಬಂದಿದೆ. ನಾಯಿಯನ್ನು ಮನೆಯೊಳಗೆ ಸೇರಿಸಬಾರದು. ಏಕೆಂದರೆ ಪ್ರತಿದಿನ ಬೆಳಿಗ್ಗೆ ನಮಾಜಿನ ಸಮಯಕ್ಕೆ ದೇವಧೂತರು (ಮಲಾಯಂಕ) ಮನೆಗೆ ಬಂದು ಸಂಪತ್ತನ್ನು ನೀಡುತ್ತಾರಂತೆ, ಇವರು ನಾಯಿಯನ್ನು ಕಂಡು ಮನೆಗೆ ಹಿಂದಿರುಗುತ್ತಾರಂತೆ, ಇದರಿಂದ ಬಡತನ, ಬರುತ್ತದೆಂಬ ನಂಬಿಕೆ ಇದೆ. ಹಾಗೆಯೇ ಪ್ರಾಣಿ, ಪಕ್ಷಿಗಳ ಚಿತ್ರವನ್ನು ಮನೆಯಲ್ಲಿ ಅಂಟಿಸಬಾರದು, ಮನುಷ್ಯರ ಎಡ, ಬಲ, ಬುಜದ ಮೇಲೆ ದೇವಧೂತರು ಕಿರಾಮನ್, ಕಾತಬೀನ್, ಯಾರಾಹಮನ್‌ದ ಬಗ್ಗೆ ನಂಬಿಕೆ ಇವರಲ್ಲಿದ್ದು, ಸ್ವರ್ಗದಲ್ಲಿ ಅತಿಯಾದ ಐಶಾರಾಮಿ ಏದೆಯೆಂದು ನರಕದಲ್ಲಿ ಯಾತನಾಮಯ ಹಿಂಸೆ ಇದೆ. ಎಂದು ನಂಬಲಾಗಿದೆ.

ಪುರುಷರು ಧರ್ಮದ ಹೆಸರಿನಲ್ಲಿ ಗಡ್ಡ ಬಿಟ್ಟರೆ, ಪುನಃ ಬೋಳಿಸಬಾರದು ತಮ್ಮ ಅಧಿಕ ಸಂಪತ್ತಿನ ಮೇಲಿನ ತೆರವನ್ನು ಝಕಾತ್ ರೂಪದಲ್ಲಿ ಬಡವರಿಗೆ ದಾನ ಮಾಡಬೇಕು. ಜ್ಟುಬಾ ಮಾಡಿದ ಹಲಾಲ್ ಪ್ರಾಣಿಯ ಮಾಂಸವನ್ನು ಮಾತ್ರ ಸ್ವೀಕರಿಸಬೇಕು.

ಮೈಲಿಗೆಯಾದವರು, ಮುಟ್ಟಾದವರು ನಮಾಜ್ ಹಾಗೂ ಉಪವಾಸ ಇರುವುದಾಗಲಿ ಖುರಾನ್ ಗ್ರಂಥ ಸ್ಪರ್ಶಿಸುವುದಾಗಲಿ ಮಾಡಬಾರದು. ಹಿರಿಯರಿಗೆ, ವಿಧೇಯರಾಗಿರಬೇಕು. ಹೆಣ್ಣು ಮಕ್ಕಳು ಬುರಖಾ ಕಡ್ಡಾಯವಾಗಿ, ಋತುಮತಿಯಾದ ಬಳಿಕ ಧರಿಸಬೇಕು ಎಂಬ ನಂಬಿಕೆಗಳಿವೆ. ಧಾರ್ಮಿಕ ಆಚರಣೆ, ಸಾಮುದಾಯಿಕ ಕ್ರಿಯಾಚರಣೆಗಳಲ್ಲಿ ಅವಕಾಶಗಳ ನಿರಾಕರಣೆ ಮುಂತಾದ ಸ್ತ್ರೀ ವಿರೋಧಿ ಧೋರಣೆಗಳಿಂದ ಮಹಿಳೆಯರ ಬದುಕನ್ನು ಶೋಚನೀಯವಾಗಿಸಿದ ಇಸ್ಲಾಂ ಸಮಾಜವು ನೀತಿ-ಧರ್ಮ-ಸಂಪ್ರದಾಯದ ಹೆಸರಿನಲ್ಲಿ ಮಹಿಳೆಯರನ್ನು ಗುಲಾಮಗಿರಿಗೆ ತಳ್ಳಿದೆ."[೮೨]

**೩.೭. ಸಂಸ್ಕಾರಗಳು**

"ಕೆಲವು ನಿಶ್ಚಿತವಾದ ಕ್ರಮದ ಜೀವಿಯ ಶಾರೀರಿಕ, ಮಾನಸಿಕ, ಆಧ್ಯಾತ್ಮಿಕ, ಉನ್ನತಿಗೆ ಅನುಕೂಲವಾಗುವಂತೆ ದೇಹವನ್ನು ಪವಿತ್ರಗೊಳಿಸುವ ಕ್ರಿಯೆಯನ್ನು 'ಸಂಸ್ಕಾರ' ಎನ್ನಲಾಗುತ್ತದೆ. ಗುಣವನ್ನು ಸೇರಿಸುವುದು, ಮತ್ತು ದೋಷವನ್ನು ಕಳೆಯುವುದನ್ನು 'ಸಂಸ್ಕಾರ' ಎಂದು ಹೇಳಲಾಗುತ್ತದೆ. ಜೀವನದ ವಿವಿಧ ಹಂತಗಳಲ್ಲಿ ಆಚರಿಸುವ ವಿಧಿ ವಿಧಾನಗಳನ್ನು 'ಸಂಸ್ಕಾರ' ಎನ್ನಲಾಗುತ್ತದೆ.

ಕೆಲವು ಸಂಸ್ಕಾರಗಳ ಪಾಲನೆಯಿಂದ ಯಾವುದೇ ವಿನಾಶವಿಲ್ಲ ಮತ್ತು ಮಹಿಳೆಯ ಚಿತ್ತಸ್ವಾಸ್ಥ್ಯಕ್ಕೆ ಯಾವುದೇ ರೀತಿಯ ಹೊರೆಯುಂಟಾಗುವುದಿಲ್ಲ. ಅಂತಹ ಸಂಸ್ಕಾರಗಳನ್ನು ಮಹಿಳೆ ಪಾಲಿಸಬಹುದು. ಎಲ್ಲಾ ಸಂಸ್ಕಾರಗಳೂ ಭಾರವೂ ಅಲ್ಲ. ಸಂಸ್ಕಾರ ಪಾಲನೆಯು ಅರಿವಿನ ಅವಶ್ಯಕತೆಗಳಿಗೆ ಪೂರಕವಾಗುವಂತೆ, ಸಂಸ್ಕೃತಿ ಪಾಲನೆಗೂ ಪ್ರೋತ್ಸಾಹವಾಗಬೇಕು. ಮತ್ತು ಮಹಿಳೆಯ ಜೀವನ ಕ್ರಮ, ಜೀವನ ಮೌಲ್ಯಗಳನ್ನು ಅನುಸರಿಸುವಂತಿರಬೇಕು. ಮತ್ತು ಮಾನವೀಯತೆಯ ಸರದಾರಿಣಿಯಂತಿರಬೇಕು. ಎನ್ನುವುದರ ಅನುಷ್ಠಾನ ಮತ್ತು ಇವುಗಳ ವಿರೋಧಾವಾದಂತವುಗಳನ್ನು ಕಡಿತಗೊಳಿಸಬೇಕು. ಎಂಬುದೇ ಈ ದಿನಗಳಲ್ಲಿ ಪ್ರತಿ ಮಹಿಳೆಗೆ ಬೇಕಾಗಿರುವ ಸಂಸ್ಕಾರದ ಬಗ್ಗೆ ಚಿಂತನೆ ಮತ್ತು ಪಾಲನೆ."[೮೩]

"ಮನೆಯ ಹೊರಗಿನ ಎಲ್ಲಾ ಧಾರ್ಮಿಕ ಕರ್ತವ್ಯಗಳಿಂದಲೂ ಸ್ತ್ರೀಯನ್ನು ಮುಕ್ತ ಗೊಳಿಸಲಾಗಿದೆ. ಕಡ್ಡಾಯ ನಮಾಝ್‌ಗಳನ್ನು ಆಕೆ ಮನೆಯಲ್ಲೇ ನಿರ್ವಹಿಸಿದರೆ ಸಾಕು, ಮಾತ್ರವಲ್ಲ ಮಸೀದಿಯಲ್ಲಿ ಅದಕ್ಕಾಗಿ ಪ್ರತ್ಯೇಕ ವ್ಯವಸ್ಥೇ ಇರುವಾಗಲೂ ಆಕೆಗೆ ಮಸೀದಿಗೆ ಹೋಗಬಾರದೆಂಬ ನಿರ್ಬಂಧ. ಆಕೆಯ ಮಟ್ಟಿಗೆ ಮನೆಯೇ ಉತ್ತಮವೆಂದು ಸಾರಲಾಗಿದೆ. ಶುಕ್ರವಾರದ ಕಡ್ಡಾಯ ನಮಾಝ್‌ನಿಂದಲೂ ಆಕೆಗೆ ವಿನಾಯಿತಿ ನೀಡಲಾಗಿಲ್ಲ.

ಹೆಣ್ಣು ಮಾಯೆ, ಆಕೆ ಮೋಹಕ್ಕೆ ಪೂರಕವಾದ ಚಂಚಲತೆಯನ್ನು ಉಂಟು ಮಾಡುವಂತಹವಳು ಗಂಡು ಹೆಣ್ಣು ಒಂದೇ ಸ್ಥಳದಲ್ಲಿ ಪ್ರಾರ್ಥನೆ ಸಲ್ಲಿಸುವುದರಿಂದ ಏನಾದರೂ ಅವಘಡ ಸಂಭವಿಸಬಹುದೆಂಬ ಆತಂಕ ಪುರುಷ ವರ್ಗದ್ದು. ಹಾಗೆಯೇ ಆಕೆ ನಮಾಜ್‌ಗಾಗಿ ಮನೆಯಿಂದ ಹೊರ ಬಂದು ಮಸೀದಿಗೆ ಬರುವಾಗ ರಸ್ತೆಯಲ್ಲಿ ಪರಪುರುಷರೊಡನೆ ಮಾತಾಡುವ ಸಾಧ್ಯತೆಗಳಿರುವುದು, ಇದಾವುದೂ ನಡೆಯಬಾರದೆಂದರೆ ಮಹಿಳೆಯರೆಲ್ಲಾ ಮನೆಯಲ್ಲಿಯೇ ಪ್ರಾರ್ಥನೆ ಸಾಕು ಎನ್ನುತ್ತಾರೆ. ವಕ್ಫ ಕೆ.ಶರೀಫ್.

ಶವ ಸಂಸ್ಕಾರದಂತಹ ದುಃಖದ ಕಾರ್ಯಗಳಲ್ಲಿಯೂ ಭಾಗವಹಿಸಬೇಕಾಗಿಲ್ಲ. ಸ್ತ್ರೀಯು ಏಕಾಂಗಿಯಾಗಿ ಪ್ರಯಾಣಿಸುವುದನ್ನು ಇಸ್ಲಾಂ ನಿಷೇಧಿಸಿದೆ. ಹಜ್ ಯಾತ್ರೆಯನ್ನು ಆಕೆ ತನ್ನ ಪತಿ ಅಥವಾ ವಿವಾಹ ನಿಷಿದ್ಧವಾದ ರಕ್ತ ಸಂಬಂಧಿಯ ಜೊತೆಯೇ ಕೈಗೊಳ್ಳಬೇಕು. ಇದರಿಂದ ಅನಿವಾರ್ಯ ಅಗತ್ಯ ವಿಲ್ಲದೆ ಸ್ತ್ರೀಯು ತನ್ನ ನೈಜ ಕಾರ್ಯಕ್ಷೇತ್ರವಾದ ಕುಟುಂಬವನ್ನು ಬಿಟ್ಟು ಹೊರ ಹೋಗಬಾರದೆಂದು ಇಸ್ಲಾಂ ಬಯಸಿದೆ ಎಂಬುದು ಸ್ಪಷ್ಟವಾಗುತ್ತದೆ.

ಸ್ತ್ರೀಯು ತನ್ನ ಪತಿಯ ಮತ್ತು ಆಪ್ತ ಬಂಧುಗಳ ಹೊರತು ಇತರರ ಮುಂದೆ ತನ್ನ ಸೌಂದರ್ಯ ಪ್ರದರ್ಶಿಸುವುದನ್ನು, ತನ್ನ ಸ್ವರ ಮಾಧುರ್ಯದ ಮೂಲಕ ಪರ ಪುರುಷರನ್ನು ಆಕರ್ಷಿಸುವುದನ್ನು ಹಾಗೂ ಕಾಮ ಪ್ರಚೋದಕ ಗಾಯನ, ಸಂಗೀತಗಳನ್ನು ಇಸ್ಲಾಂ ನಿಷೇಧಿಸಿದೆ.

ಸ್ತ್ರೀಯು ಪರ ಪುರುಷರೆದುರು ನೃತ್ಯ ಮಾಡುವುದಂತಿರಲಿ ಕೈಯ ಬಳೆ, ಕಾಲ ಗೆಜ್ಜೆಯಂತಹ ಅಭರಣಗಳಿಂದ ಸದ್ದು ಮಾಡಿ ನಡೆಯುವುದನ್ನು, ಸುಗಂಧ ದ್ರವ್ಯಗಳನ್ನು ಲೇಪಿಸಿಕೊಂಡು ಮಾರ್ಗದಲ್ಲಿ ನಡೆದಾಡುವುದನ್ನು ಮತ್ತೆ ಪುರುಷ ಸಮೂಹದ ಮಧ್ಯೆ ಹೋಗುವುದನ್ನು ಇಸ್ಲಾಂ ಅನುಮತಿಸಿಲ್ಲ.

ಮಹಿಳೆಯರ ನೈಸರ್ಗಿಕವಾದ ಕೆಲವು ಅಡೆ-ತಡೆಗಳು, ಇತಿ-ಮಿತಿಗಳು, ಕರ್ತವ್ಯಗಳು ಮತ್ತು ಹೊಣೆಗಾರಿಕೆಗಳಿಂದಾಗಿ ಇಸ್ಲಾಂ ಆಕೆಗೆ ಅನೇಕ ಧಾರ್ಮಿಕ, ವಿಧಿ ಕರ್ತವ್ಯಗಳಿಂದ ವಿನಾಯಿತಿ ನೀಡಿದೆ.

ಮಹಿಳೆಯರಿಗೆ ಆಗುವ ಮಾಸಿಕ ಆರ್ತವ ಪ್ರಸವಾನಂತರದ ರಕ್ತ ಸ್ರಾವಗಳ ವೇಳೆ ನಮಾಝ್ ಮತ್ತು ಉಪವಾಸ ವ್ರತಗಳಂತಹ ಕಡ್ಡಾಯ ಕರ್ತವ್ಯಗಳಿಂದ ಆಕೆಗೆ ವಿನಾಯಿತಿ ಇದೆ. ಆರ್ತವ ಕಾಲದಲ್ಲಿ ಆಕೆಯ ಮೇಲೆ ನಮಾಝ್ ಕಡ್ಡಾಯವಲ್ಲವೆಂಬುದು ಮಾತ್ರವಲ್ಲ. ಆ ಕಾಲಾವಧಿಯಲ್ಲಿ ಆಕೆ ನಮಾಝ್ ಮಾಡಬಾರದೆಂದೇ ವಿಧಿಸಲಾಗಿದೆ. (ಹಾಗೆ ಬಿಟ್ಟು ಹೋದ ನಮಾಝ್‌ಗಳನ್ನು ಆಕೆ ಮತ್ತು ಆಚರಿಸಿ ಸಾಲ ತೀರಿಸಬೇಕಾಗಿಯೂ ಇಲ್ಲ.)

ಮಹಿಳೆಯರ ನೈಸರ್ಗಿಕವಾದ ಕೆಲವು ಅಡೆ-ತಡೆಗಳು, ಇತಿ-ಮಿತಿಗಳು, ಕರ್ತವ್ಯಗಳು ಮತ್ತು ಹೊಣೆಗಾರಿಕೆಗಳಿಂದಾಗಿ ಇಸ್ಲಾಂ ಆಕೆಗೆ ಅನೇಕ ಧಾರ್ಮಿಕ, ವಿಧಿ-ಕರ್ತವ್ಯಗಳಿಂದ ವಿನಾಯಿತಿ ನೀಡಿದೆ.

ಅಂತೆಯೇ ಪ್ರಸವಾ ನಂತರದ ಅಶುದ್ಧಿಯ ಕಾಲದಲ್ಲಿಯೂ ಆಕೆಗೆ ನಮಾಝ್‌ನಿಂದ ವಿನಾಯಿತಿ ಇದೆ. ಪ್ರಸ್ತುತ ಅಶುದ್ಧಿಯ ಅವಧಿಗಳಲ್ಲಿ ರಮಝಾನ್ ತಿಂಗಳು ಬಂದರೆ ಆ ದಿನಗಳ ಉಪವಾಸ ವ್ರತವನ್ನು ಆಕೆ ಆಚರಿಸಬೇಕಾಗಿಲ್ಲ. ಆದರೆ ಹಾಗೆ ಬಿಟ್ಟು ಹೋದ ಉಪವಾಸ ವ್ರತದ ಸಂಖ್ಯೆಯನ್ನು ಮಹಿಳೆಯರು ಇತರ ಹನ್ನೊಂದು ತಿಂಗಳಲ್ಲಿ ಮುಂದಿನ ರಮಝಾನ್ ತಿಂಗಳಿಗೆ ಮುಂಚಿತವಾಗಿ ಪೂರ್ತಿಗೊಳಿಸಬೇಕು. ಇದೇ ರೀತಿ ಆ ಅವಧಿಯಲ್ಲಿ ಪವಿತ್ರ ಕುರ್‌ಆನ್‌ನ ಪಾರಾಯಣವನ್ನು ಆಕೆಗೆ ನಿಷೇಧಿಸಲಾಗಿದೆ.

ಆದರೆ ಇದರರ್ಥ ಆರ್ತವ ಕಾಲದಲ್ಲಿ ಕೆಲವು ಧರ್ಮ ಮತ್ತು ಜಾತಿಗಳಲ್ಲಿ ರೂಢಿಯಲ್ಲಿರುವಂತೆ ಮಹಿಳೆಯನ್ನು ಅಸ್ಪೃಶ್ಯಳೆಂದು ತಿಳಿದುಕೊಳ್ಳಬೇಕೆಂದು ಖಂಡಿತ ಅಲ್ಲ. ಪ್ರವಾದಿ ವಿಶದೀಕರಿಸಿದ ಪ್ರಕಾರ ಆರ್ತವಾವಸ್ಥೆಯಲ್ಲಿ

ಅವರ ಜೊತೆ ಸಂಭೋಗ ಮಾತ್ರ ಮಾಡಬಾರದೆಂದೂ, ಇತರ ಎಲ್ಲಾ ವ್ಯವಹಾರಗಳನ್ನು ಎಂದಿನಂತೆ ಉಳಿಸಿಕೊಂಡಿರಬೇಕೆಂದೂ ತಿಳಿದು ಬರುತ್ತದೆ.

ಹಾಗೆಯೇ ಪತಿ ಅಥವಾ ವಿವಾಹ ನಿಷಿದ್ಧ ಬಂಧು ಒಬ್ಬರು ಜೊತೆಯಲ್ಲಿಲ್ಲದೆ ಹಜ್ ಯಾತ್ರೆಯನ್ನು ಆಕೆ ಕೈಗೊಳ್ಳಬೇಕಾಗಿಲ್ಲ.

ಮಹಿಳೆಯರು ಮನೆಯಲ್ಲಿ ನಮಾಝ್ ಮಾಡಿದರೆ ಅದು ಪುರುಷರು ಮಸೀದಿಯಲ್ಲಿ ಮಾಡುವ ನಮಾಝ್‌ಗೆ ಸಮಾನವಾದ ಪುಣ್ಯಕ್ಕೆ ಅರ್ಹವಾಗಿದೆ. ಮನೆಯಲ್ಲೇ ಅವರಿಗೆ ಜುಮಾ ನಮಾಝ್‌ನ ಪುಣ್ಯವೂ ದೊರೆಯುತ್ತದೆ. ಈದ್‌ನ ನಮಾಝಿನಿಂದಲೂ ಅವರಿಗೆ ವಿನಾಯಿತಿ ನೀಡಲಾಗಿದೆ. ಮಹಿಳೆ ತನ್ನ ಮನೆಯ ವಾತವರಣವನ್ನು ಹರ್ಷದಾಯಕವಾಗಿರಿಸಿದರೆ, ತನ್ನ ಪತಿಯ ಆದೇಶಗಳನ್ನು ಪಾಲಿಸುತ್ತಿದ್ದರೆ, ಮತ್ತು ಮಕ್ಕಳ ಪಾಲನೆ ಪೋಷಣೆ ಹಾಗೂ ತರಬೇತಿ ಮಾಡುತ್ತಿದ್ದರೆ ಆಕೆಗೆ ಮನೆಯಲ್ಲಿದ್ದುಕೊಂಡೇ ಜಿಹಾದ್ (ಧರ್ಮಯುದ್ಧ) ಮತ್ತು ಹಜ್ಜ್ ಮಾಡಿದ ಪುಣ್ಯ ಲಭಿಸುತ್ತದೆ ಎಂದು ನೂರಾನಿ ಮಸಿದೀಯ ಹಫೀಸಾಬ್ ಹೇಳುತ್ತಾರೆ.

ಜಿಹಾದ್‌ನಲ್ಲಿ ಸ್ವತಃ ಭಾಗವಹಿಸಲು ಸಾಧ್ಯವಾದವರು ಜಿಹಾದ್‌ಗೆ ಬೇಕಾದ ಸಾಧನಗಳನ್ನು ಒದಗಿಸಿದರೆ, ಜಿಹಾದ್ ಮಾಡುವವರಿಗೆ ನೆರವಾದರೆ ಅಥವಾ ಅವರ ಗೈರು ಹಾಜರಿಯಲ್ಲಿ ಅವರ ಮನೆ ಮಂದಿಯ ಅವಶ್ಯಕತೆಗಳನ್ನು ಪೂರೈಸಿದರೆ ಅವರಿಗೆ ಜಿಹಾದ್‌ನ ಪುಣ್ಯ ದೊರಕುತ್ತದೆ. ಮಹಿಳೆಯು ಜಿಹಾದ್ ಮಾಡುವವನ ತಾಯಿ, ಸೋದರಿ ಅಥವಾ ಪತ್ನಿಯಾಗಿದ್ದರೆ ಆಕೆ ಜಿಹಾದ್‌ನ ಪುಣ್ಯಕ್ಕೆ ಇನ್ನೂ ಹೆಚ್ಚಿನ ಅರ್ಹಳಾಗುತ್ತಾಳೇ.

ಮಹಿಳೆಯರಿಗೆ ಮನೆಯಲ್ಲಿದ್ದುಕೊಂಡೇ ಪುರುಷರಿಗೆ ಸಮಾನವಾದ ಪುಣ್ಯ ಸಿಗುವುದು ಅಲ್ಲಾಹನ ಒಂದು ಅನುಗ್ರಹವಾಗಿದೆ. ಜನಾಝ (ಮೃತಶರೀರ) ವನ್ನು ಹೋರುವುದು ಸ್ತ್ರೀಯರಿಗೆ ಭೂಷಣವಾದ ಕೆಲಸವಲ್ಲದುದರಿಂದ ಅವರಿಗೆ ಅದರಿಂದಲೂ ಪೂರ್ಣ ವಿನಾಯಿತಿ ನೀಡಲಾಗಿದೆ. ಜನಾಝ ಯಾತ್ರೆಯಲ್ಲಿ ಭಾಗವಹಿಸುವುದರಿಂದ ಪರ್ದಾದ ನಿಯಮವನ್ನು ಪೂರ್ಣವಾಗಿ ಪಾಲಿಸಲು ಸಾಧ್ಯವಾಗದೆ. ಇರಬಹುದು. ಅಪರಿಚಿತ ಸ್ತ್ರೀ ಪುರುಷರ ಮಧ್ಯೆ ನೂಕುನುಗ್ಗಲಾಗಬಹುದು. ಮೃತರ ಆಪ್ತರಾದ ಸ್ತ್ರೀಯರು ದುಃಖ ತಾಳಲಾರದೆ ಬಹಿರಂಗವಾಗಿ ರೋಧಿಸಬಹುದು.

ಈ ಎಲ್ಲಾ ಕಾರಣಗಳಿಗಾಗಿ ಮಹಿಳೆಯರು ಜನಾಝ ಯಾತ್ರೆಯಲ್ಲಿ ಪಾಲ್ಗೊಳ್ಳುವುದನ್ನು ನಿಷೆಧಿಸಲಾಗಿದೆ.

ಸ್ತ್ರೀಯರಿಗೆ ಮಸೀದಿಗೆ ಹೋಗುವದರಿಂದ ವಿನಾಯಿತಿ ನೀಡಲು ಇನ್ನೊಂದು ಪ್ರಮುಖ ಕಾರಣವೂ ಇದೆ. ಯಾವ ಸ್ತ್ರೀಯೂ ತನ್ನ ಮಾಸಿಕ ಆರ್ತವ ಇತ್ಯಾದಿ ಸ್ತ್ರೀ ಸಹಜ ಪ್ರಕ್ರಿಯೆಗಳನ್ನು ಇತರ ಸ್ತ್ರೀಯರ ಮುಂದೆಯೂ ಬಹಿರಂಗ ಪಡಿಸಲು ಇಷ್ಟಪಡುವುದಿಲ್ಲ. ಮಹಿಳೆಯರಿಗೆ ಸಾಮೂಹಿಕ ನಮಾಝ್ ಮತ್ತು ಜುಮಾ ಕಡ್ಡಾಯವಾದರೆ ಈ ವಿಷಯಗಳು ಇತರ ಮಹಿಳೆಯರ ಗಮನಕ್ಕೆ ಬಾರದೆ ಇರುವುದಿಲ್ಲ. ಆದುದರಿಂದ ಇಸ್ಲಾಂನಲ್ಲಿ ಸ್ತ್ರೀ ಪುರುಷರಿಗೆ ಅವರವರ ಶಾರೀರಿಕ ಮತ್ತು ಮಾನಸಿಕ ಸ್ವಭಾವ ಪ್ರಕೃತಿಗೆ ಅನುಗುಣವಾದ ಹಕ್ಕು ಬಾಧ್ಯತೆಗಳನ್ನು ಹಾಗೂ ಕರ್ತವ್ಯಗಳನ್ನು ಮಾತ್ರ ನಿಶ್ಚಯಿಸಲಾಗಿದೆ.

ಪುರುಷರಿಗೆ ಸಮಾನವಾಗಿ ಪುಣ್ಯ ಸಂಪಾದಿಸುವ ಸ್ತ್ರೀಯರಿಗೆ ಏಕಿಲ್ಲ? ಪುರುಷರಿಗೆ ಜುಮಾ ನಮಾಝ್ ಇದೆ.

ಮುಸ್ಲಿಂನೊಬ್ಬ ಮೃತಪಟ್ಟರೆ ಮಹಿಳೆಯರು ಆತನ ಪಾರ್ಥಿವ ಶರೀರವನ್ನು ಹೊತ್ತುಕೊಂಡು ಹೋಗುವಂತಿಲ್ಲ.

ದಫನ ಕಾರ್ಯಗಳಲ್ಲಿ ಭಾಗವಹಿಸುವಂತಿಲ್ಲ.

ರೋಗಿಗಳ ಸಂದರ್ಶನಕ್ಕೆ ಕೂಡಾ ಕೇವಲ ಪುರುಷರೇ ಹೋಗುತ್ತಾರೆ. ಅವರಾಗಿ ಹೋದರೆ ಅದು ಬೇರೆ ಮಾತು. ಪುರುಷರಂತೆ ಅವರನ್ನು ರೋಗಿಗಳ ಸಂದರ್ಶನಕ್ಕೆ ಹೋಗಲು ಪ್ರೋತ್ಸಾಹಿಸಿಲ್ಲ.

ಪುರುಷರಾದರೆ ತಾವಾಗಿಯೇ ಹಜ್ ಯಾತ್ರೆಗೆ ಹೋಗಬಹುದು, ಆದರೆ ಮಹಿಳೆಯರು ವಿವಾಹ ನಿಷಿದ್ಧವಾದ ಆಪ್ತ ಬಂಧುಗಳ ಜೊತೆಗಲ್ಲದೆ ಹೋಗುವಂತಿಲ್ಲ.

ರಸ್ತೆಯಲ್ಲಿ ಸ್ತ್ರೀ ಪುರುಷರು ಜೊತೆಯಾಗಿ ನಡೆಯಬೇಕಾದು ಸ್ತ್ರೀಯರು ರಸ್ತೆಯ ನಡುವೆ ಓಡಾಡಬಾರದು. ಅವರು ರಸ್ತೆಯ ಬದಿಯಲ್ಲೇ ಸಂಚರಿಸಬೇಕು. ಪುರುಷರು ನಡೆಯುವಾಗ ಸ್ತ್ರೀಯರಿಂದ ದೂರವಾಗಿಯೇ ನಡೆಯಬೇಕು. ಧೂಳು ಮುಕ್ಕಿದ ಅಥವಾ ಕೆಸರಿನಲ್ಲಿ ತೊಯ್ದು ಹಂದಿಯು ತಾಗಿದರೂ ಪರವಾಗಿಲ್ಲ. ಆದರೆ ಪರಸ್ತ್ರೀಯರನ್ನು ಪುರುಷನ ತೋಳು ಡಿಕ್ಕಿ ಹೊಡೆಯಬಾರದು.

ಸಭ್ಯ ಮಹಿಳೆಯರು ಅಗತ್ಯದ ಸಂದರ್ಭಗಳಲ್ಲಿ ರಸ್ತೆಗಳಲ್ಲಿ ನಡೆಯುವಾಗ ಬುರ್ಖಾ ಅಥವಾ ಚದ್ದರದಿಂದ ತಮ್ಮ ವಸ್ತ್ರಾಲಂಕಾರಗಳನ್ನು, ಸೌಂದರ್ಯವನ್ನು ಮರೆಸಬೇಕು. ಮುಖದ ಮೇಲೂ ಅವಗುಂಟನ ಹಾಕಿಕೊಳ್ಳಬೇಕು.

ಕಣಕಣ ಶಬ್ದ ಬರುವ ಆಭರಣಗಳನ್ನು ಧರಿಸಿ ನಡೆಯದಿರುವುದೇ ಲೇಸು, ಒಂದು ವೇಳೆ ಹಾಗೆ ನಡೆದಾಗ ಅದರ ಶಬ್ದವು ಪರಪುರುಷರಿಗೆ ಕೇಳಿಸದಂತೆ ಸಾವಧಾನದಿಂದ ನಡೆಯಿರಿ.

ಘಮ ಘಮಿಸುವ ಸುಗಂಧ ದ್ರವ್ಯಗಳನ್ನು ಪೂಸಿ ಮಹಿಳೆಯರು ದಾರಿಯಲ್ಲಿ ನಡೆದಾಡಬಾರದು.

ಯಾವುದೇ ಧರ್ಮದ ವ್ಯತ್ಯಾಸವಿಲ್ಲದೆ ಇಂದು ವೈಯುಕ್ತಿಕ ಬೆಳವಣಿಗೆಗಾಗಿ, ಉಳಿವಿಗಾಗಿ ಅನುಸರಿಸಬೇಕಾದ ನಿರ್ದಿಷ್ಟ ಪ್ರಮಾಣದ ಕ್ರಮಗಳು, ಕೈಗೊಳ್ಳಬೇಕಾದ ಕಾರ್ಯಗಳ ವಿರುದ್ಧವಾಗಿರುವ ಯಾವುದೇ ಸಂಸ್ಕಾರಗಳನ್ನು ಪಾಲಿಸಬೇಕಾದವಶ್ಯಕತೆಯಿಲ್ಲ ಎಂಬುದನ್ನು ಅಂತಹ ಸಂದರ್ಭಗಳಲ್ಲಿ ಯಾವುದೇ ಅಳುಕಿಲ್ಲದೆ ಅನುಸರಣೆ ಮಾಡುವುದು, ಕೇವಲ ಮಹಿಳೆಯ ಕರ್ತವ್ಯವಲ್ಲ, ಅದು ಆಕೆಯ ಹಕ್ಕು. ಆ ಹಕ್ಕನ್ನು ಪುರಸ್ಕರಿಸುವುದು ಇತರರ ಕರ್ತವ್ಯ.[೨]

ಪರದಾ ಆಚರಣೆ, ಧಾರ್ಮಿಕ ಆಚರಣೆಗಳಲ್ಲಿನ ನಿಷೇಧಗಳು ಮತ್ತಿತರವುಗಳ ಪಾಲನೆಗೆ ವಿರೋಧ ಎಲ್ಲೆಡೆ ಆಗಲೇ ಬೇಕಾಗಿದೆ. ಪ್ರತಿ ಮಹಿಳೆಗೆ ಯಾವುದೇ ಸಂಸ್ಕಾರ, ಪಾಲನಾ ಶೃಂಗಾರವಾಗಲಿ, ಮತ್ತದನ್ನು ಆ ಮಹಿಳೆ ಆನಂದಿಸಲಿ, ಹಾಗೂ ಯಾವುದೇ ಸಂಸ್ಕಾರವೂ ಯಾವುದೇ ಮಹಿಳೆಗೆ ವಿಪ್ರಲಂಭ ಶೃಂಗಾರವಾಗದಿರಲಿ.

''ಒಟ್ಟಿನಲ್ಲಿ ಜೀವ-ಧರ್ಮ ಪ್ರಗತಿ ವಿರೋಧಿಯಾದ ಇಸ್ಲಾಂ ಮೂಲಭೂತವಾದಿತ್ವವು ಇಂದಿಗೂ ಜಗತ್ತಿನಾದ್ಯಂತ ವಿಜೃಂಭಿಸುತ್ತಿರುವುದು ನಾಗರಿಕ ಸಮಾಜದ ದೊಡ್ಡ ದುರಂತವಾಗಿದೆ. ಶತಮಾನಗಳ ಈ

ಮಾನವೀಯ ಆಚರಣೆಗಳು ಮುಸ್ಲಿಂ ಮಹಿಳೆಯರ ವ್ಯಕ್ತಿತ್ವ ಸೃಜನ ಶೀಲತೆ, ಅಸ್ತಿತ್ವವನ್ನು ಸಂಪೂರ್ಣವಾಗಿ ದಮನಗೊಳಿಸುತ್ತಿರುವ ವಾಸ್ತವವು ಅಸಹನೀಯವಾಗಿದೆ."[೧೫]

ಮತಾಂಧತೆಯ ಕಪಿ ಮುಷ್ಟಿಯಿಂದ ಮುಸ್ಲಿಂ ಮಹಿಳೆಯರ ಬದುಕನ್ನು ವಿಮೋಚನೆಗೊಳಿಸುವಲ್ಲಿ ವಿದ್ಯೆ, ಸ್ವಾವಲಂಬನೆ, ಸಂಘಟನೆ, ವೈಚಾರಿಕತೆ, ಮಾನವೀಯತೆಯ ಬೆಳಕು ಮೂಡಿಬರಬೇಕಾಗಿದೆ. ಇಸ್ಲಾಂ ಧರ್ಮವು ಮೆಹರ್ ಪದ್ಧತಿಯ ಮೂಲಕ ವಿವಾಹಿತ ಮಹಿಳೆಗೆ ಆರ್ಥಿಕ ಭದ್ರತೆ ಕಲ್ಪಿಸಿದೆ.

ಧರ್ಮ, ನಂಬಿಕೆ, ಸಂಪ್ರದಾಯ, ಮೌಲ್ಯ ಯಾವುದೇ ಇರಲಿ, ಅವು ಜೀವ ವಿರೋಧಿ ಅಂಶಗಳನ್ನು ಪ್ರತಿಪಾದಿಸಲು ಹೊರಟಾಗ ಸಮಾಜದ ಒಟ್ಟು ಅಭಿವೃದ್ಧಿಯ ಮೇಲೆ ದುಷ್ಪರಿಣಾಮವನ್ನು ಬೀರುತ್ತದೆ. ಲಿಂಗ ತಾರತಮ್ಯವನ್ನು ಎತ್ತಿ ಹಿಡಿಯುವ ನಂಬಿಕೆ, ಆಚರಣೆ, ಮೌಲ್ಯಗಳು ಮಹಿಳಾ ವಿರೋಧಿಯಾಗಿ ಹೇಗೆ ಕೆಲಸ ಮಾಡುತ್ತಿವೆ ಎನ್ನುವುದನ್ನು ಆಕೆಯ ಗಮನಕ್ಕೆ ತರಬೇಕಾಗಿದೆ.

ಸಾಂಪ್ರದಾಯಿಕ ಧರ್ಮಾಚರಣೆ ಒಂದು ವಿಧಿ ವಿಧಾನಗಳ ಕಟ್ಟಳೆ ಮಾತ್ರವಾಗಿರದೆ ಬದುಕಲು ಮಾರ್ಗದರ್ಶನ ನೀಡುವಂತಹುದೂ ಆಗಿರಬೇಕು ಎಂದು ನನ್ನ ಅಭಿಪ್ರಾಯ. ಮೂಢನಂಬಿಕೆಗಳ ಬಲೆ ಹೆಣೆದ ಸಾಮಾಜಿಕ ವ್ಯವಸ್ಥೆ (ಪ್ರತಿ ಧರ್ಮ) ಯು ಧರ್ಮದೊಳಗಿನ ತನ್ನ ಅಂಧ ಆಚರಣೆಗಳನ್ನು ತ್ಯಜಿಸದೆ ಹೋದರೆ ಅವೈಚಾರಿಕತೆಯ ಕೊಳೆ ನಿರ್ವಹಣೆ ಹೇಗೆ ತಾನೆ ಸಾಧ್ಯ? ಸಂಪ್ರದಾಯವಾದಿ ಮನೋಧರ್ಮ ಉಳ್ಳ ಮಹಿಳೆಯರು ಈ ಸಂಪ್ರದಾಯದ ಸ್ಥಿತಿಗತಿಗಳಿಂದ ಹೊರಬರಬೇಕಾದ ಪರಿಸ್ಥಿತಿ ನಿರ್ಮಾಣವಾಗಬೇಕಾಗಿದೆ.

**೩.೮. ಸಾಂಪ್ರದಾಯಿಕ ಗೃಹಿಣಿತ್ವ**

"ನಮ್ಮ ಪುರುಷ ಪ್ರಧಾನ ಸಮಾಜದಲ್ಲಿ ಸನಾತನ ಕಾಲದಿಂದಲೂ ಹೆಣ್ಣಿಗೆ ಅನೇಕ ಸಂಪ್ರದಾಯಗಳಲ್ಲಿ, ನಂಬಿಕೆಗಳ ಚೌಕಟ್ಟಿನೊಳಗೆ ಕಟ್ಟಿಡುವ ಪ್ರಯತ್ನಗಳು ನಡೆದು ಬಂದಿವೆ. ಮತ್ತು ನಡೆಯುತ್ತಲೇ ಇವೆ. ನಮ್ಮ ಮುಸ್ಲಿಂ ಸಮಾಜ, ಧರ್ಮ, ಮಹಿಳೆಯರನ್ನು ಸಾಂಪ್ರದಾಯಿಕತೆಯ ಅಡಿಯಲ್ಲಿ ಅನೇಕ ನಿರ್ಬಂಧನೆಗಳಡಿಯಲ್ಲಿ ಬದುಕುವಂತೆ ಮಾಡಿವೆ.

ಹಾಗೆಯೇ ಅನೇಕ ಸಂಬಂಧಗಳನ್ನೂ ಪಾಲಿಸಿಕೊಂಡು ಬರುವಂತೆ ಮಾಡಿವೆ. ಮೊದಲು ಒಬ್ಬ ಹೆಣ್ಣಾಗಿ ನಂತರ ತಾಯಿಯಾಗಿ, ಮಗಳು, ಸೋದರಿ, ಹೆಂಡತಿ, ಸೊಸೆ, ಮುತ್ತೈದೆ, ವಿಧವೆ, ಗೃಹಿಣಿ ಹೀಗೆ ಇನ್ನೂ ಅನೇಕ ಸಾಂಪ್ರದಾಯಿಕ ಸಂಬಂಧಗಳನ್ನೂ ನಿಭಾಯಿಸುವ ಜವಬ್ದಾರಿಯನ್ನೂ ಮುಸ್ಲಿಂ ಕುಟುಂಬದ ಮಹಿಳೆಯ ಹೆಗಲ ಮೇಲೂ ಹೇರಲಾಗಿದೆ.

ಪುರುಷ ಪ್ರಧಾನ ಸಮಾಜವು ಹೆಣ್ಣಾದವಳು ಹೀಗೆಯೇ ಇರಬೇಕು. ಅವಳ ನಡೆ-ನುಡಿ, ಉಡುಗೆ-ತೊಡುಗೆಗಳು, ಹೀಗೆಯೇ ಇರಬೇಕೆಂದು, ಇನ್ನುಳಿದಂತೆ ಅನೇಕ ವಿಷಯಗಳಲ್ಲಿಯೂ ಕೂಡ ಪುರುಷ ಧರ್ಮ ಮತ್ತು ದೇವರ ಹೆಸರಿನಲ್ಲಿ ತನ್ನಿಷ್ಟಕ್ಕೆ ತಕ್ಕಂತಹ ಮೌಲ್ಯಗಳನ್ನು ರೂಪಿಸುತ್ತಾ ಆ ಮೌಲ್ಯಗಳನ್ನೂ ಸಂಪ್ರದಾಯಗಳೆಂದು ಪಾಲಿಸಿಕೊಂಡು ಬರುವಂತೆ ಈ ವ್ಯವಸ್ಥೆ ಮಾಡಿದೆ. ಹೆಣ್ಣನ್ನು ಸದಾ ತನ್ನ ನಿಯಂತ್ರಣದಲ್ಲಿರಿಸಿಕೊಳ್ಳುವ ಪ್ರಯತ್ನಗಳಿಗೆ ಈ ಸಂಪ್ರದಾಯಗಳು, ಧರ್ಮ, ಆಚರಣೆಗಳು ನಂಬಿಕೆಗಳು ಪ್ರಬಲ ಅಸ್ತ್ರಗಳಾಗಿವೆ. ಹಾಗೆಯೇ

ಇಂತಹ ಸಾಂಪ್ರದಾಯಿಕ ಸಂಬಂಧಗಳಿಗೆ ಅದರದೇ ಆದ ಮಹತ್ವವಿರುವುದನ್ನೂ ನಮ್ಮ ಧರ್ಮ ಗ್ರಂಥಗಳು ಸಾರುತ್ತಲೇ ಬಂದಿವೆ. ಸಂಪ್ರದಾಯಿಕ ಸಂಬಂಧಗಳು ಪುರುಷ ಮತ್ತು ಮಹಿಳೆಯ ಇಬ್ಬರಿಗೂ ಅನ್ವಯವಾಗಿದ್ದರೂ ಪುರುಷನಿಗೆ ಈ ಸಂಬಂಧಗಳು ಆಯ್ಕೆಯಾಗಿರುತ್ತವೆ ಹೊರತು ಅನಿವಾರ್ಯ ವಾಗಿರುವುದಿಲ್ಲ.''[೬]

ಮಜ್ಜಿಗೆಯಲ್ಲಿದ್ದ ಬೆಣ್ಣೆ ಕೆಡುವುದಿಲ್ಲ ಅಂಕೆಯಲ್ಲಿದ್ದ ಹೆಣ್ಣು ಕೆಡುವುದಿಲ್ಲ.

ಹೀಗೆ ಮಹಿಳೆಯರನ್ನು ಕೌಟುಂಬಿಕ ಸೌಖ್ಯದ ಬಗ್ಗೆ ಅದರ ಸೋಲು-ಗೆಲುವಿನ ಬಗ್ಗೆ ಪುರುಷನಿಗಿಂತಲೂ ಹೆಣ್ಣಿಗೆ ಜವಾಬ್ದಾರಿ ಹೆಚ್ಚಾಗಿರುತ್ತದೆ. ಮತ್ತು ಹೆಣ್ಣಿಗೆ ಸ್ವತಂತ್ರವನ್ನೂ ಕೊಡುವ ಬದಲು ಆಕೆಯನ್ನೂ ಅಂಕೆಯಲ್ಲಿಟ್ಟುಕೊಳ್ಳಬೇಕು ಎಂಬ ನೀತಿ ನಮ್ಮ ಮುಸ್ಲಿಂ ಸಮುದಾಯದಲ್ಲಿ ಬೇರೂರಿದೆ.

ಹೆಣ್ಣು ಪ್ರಕೃತಿಯಾಗಿ ಪರಿಗಣಿಸಲ್ಪಟ್ಟಿದ್ದರಿಂದ ಅವಳು ಅದನ್ನು ದಾಟಿ ಸಂಸ್ಕೃತಿ ನೆಲೆಗೆ ಬರಕೂಡದು. ಹೆಣ್ಣಿನ ಬದುಕು ಗೃಹ ಚೌಕಟ್ಟಿಗೆ ಸೀಮಿತವಾಗಿದೆ. ಬಾಹ್ಯ ಸಂಪರ್ಕದ ಅವಶ್ಯಕತೆ ಹೆಣ್ಣಿಗೆ ಇಲ್ಲ. ಹಾಗೂ ಅದು ಅವಳ ಬದುಕಿನ ಕ್ರಮಕ್ಕೆ, ಮುಸ್ಲಿಂ ಸಮಾಜದ ನಿಯಮಗಳಿಗೆ ಹೊಂದುವಂತದ್ದಲ್ಲ. ಯಾವಾಗ ಬಾಹ್ಯ ಸಂಪರ್ಕದಂತಹ ಪ್ರಕ್ರಿಯೆಗೆ ಒಳಗಾಗುವಳು ಆಗ ಪರಿಶುದ್ಧತೆಯನ್ನು ಕಳೆದುಕೊಳ್ಳುವಳು, ಅವಳು ಪರಿಶುದ್ಧಳಾಗಿರಬೇಕಾದರೆ ಸಾಂಪ್ರದಾಯಿಕ ಗೃಹ ಚೌಕಟ್ಟಿನೊಳಗೆ ಇರಬೇಕು. ಎಂದು ವಕ್ತ ಉಮರ್ ಖಾನ್ ಹೇಳಿಕೆ. ಜೊತೆಗೆ ಇವರು ಹೆಣ್ಣು ಮಕ್ಕಳ ಸೂಕ್ಷ್ಮ ಬೆಳವಣಿಗೆ ಹಾಗೂ ಪುರುಷ ಸಮಾಜದಲ್ಲಿ ವಿನಯದಿಂದ ಗಂಡನ ಮೇಲೆ ಅವಲಂಬಿರಾಗಿ ಜೀವನವಿಡೀ ಬದುಕಬೇಕು. ಅಲ್ಲಾನೇ ಎಲ್ಲಾದನ್ನು ಕರುಣಿಸುತ್ತಾನೆ. ಅವನ ಧ್ಯಾನವನ್ನು ನಿರಂತರವಾಗಿ ಮನೆಯಲ್ಲಿರುವ ಹೆಣ್ಣು ಮಕ್ಕಳು ಮಾಡಿ, ಎಲ್ಲರನ್ನು ನೋಡಿಕೊಳ್ಳಬೇಕು ಎನ್ನುವಲ್ಲಿಯ ಅವರ ನಿಲುವು, ಅಭಿಪ್ರಾಯ ದೃಢನಿರ್ಧಾರ ಎಂದು ಹೇಳಿದರು. ಇದು ಆಶ್ಚರ್ಯಕರವಾಗಿಯೂ ಹಾಗೂ ಬೇಸರವಾಗಿಯೂ ಅದೇ ಸಮುದಾಯದಲ್ಲಿ ಬೆಳೆದಿರುವ ನನಗೆ ಕಂಡಿತು.

**ಟಿಪ್ಪಣಿಗಳು**

೧. ಕೆ. ಷರೀಫಾ ಬಂಡಾಯ; ಮುಸ್ಲಿಂ ಸಂವೇದನೆ (ಮುಸ್ಲಿಂ ಹೆಣ್ಣು ಸಂದಿಗ್ಧಗಳು ಸುಳಿಯಲ್ಲಿ), ಸಿ.ವಿ.ಜಿ. ಪ್ರಕಾಶನ ಬೆಂಗಳೂರು, ೨೦೦೪, ಪು.ಸಂ.೪೭.

೨. ಡಾ. ಜ್ಯೋತಿ ಶಶಿಕುಮಾರ್, ಮಹಿಳಾ ಸಾಮಾಜಿಕತೆ (ಧರ್ಮ ಮತ್ತು ಮಹಿಳೆ) ಮಹಿಳಾ ಅಧ್ಯಯನ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭, ಪು.ಸಂ ೧೩೪.

೩. ಡಾ. ಜ್ಯೋತಿ ಶಶಿಕುಮಾರ್. ಮಹಿಳಾ ಸಾಮಾಜಿಕತೆ (ಧರ್ಮ ಮತ್ತು ಮಹಿಳೆ) ಮಹಿಳಾ ಅಧ್ಯಯನ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭, ಪು.ಸಂ ೨೧೩,೨೧೪.

೪. ಸುನಂದ.ಎಂ, ನಿಷೇಧಗಳು ಮತ್ತು ಲಿಂಗ ವ್ಯವಸ್ಥೆ (ಅಪ್ರಕಟಿತ ಮಹಾ ಪ್ರಬಂಧ), ಕನ್ನಡ ಶ್ವವಿದ್ಯಾಲಯ, ಹಂಪಿ, ೨೦೦೭, ಪು.ಸಂ. ೧೦,

೫. ಇಬ್ರಾಹಿಂ ಸಈದ್, ತಪ್ಪು ಕಲ್ಪನೆಗಳು (ಆಚಾರ ಸಂಪ್ರದಾಯಗಳು: ಪರದಾ) ಶಾಂತಿ ಪ್ರಕಾಶನ, ೧೯೯೩, ಪು.ಸಂ ೫೩.

೬. ಕೆ. ರಾಮ್, ಇಸ್ಲಾಂ ಧರ್ಮ-ಮಹಿಳೆ (ಅಪ್ರಕಟಿತ ಸಂಪ್ರಬಂಧ), ಮಹಿಳಾ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭. ಇಬ್ರಾಹಿಂ ಸಈದ್, ತಪ್ಪು ಕಲ್ಪನೆಗಳು (ಆಚಾರ ಸಂಪ್ರದಾಯಗಳು: ಪರದಾ) ಶಾಂತಿ ಪ್ರಕಾಶನ, ೧೯೯೩, ಪು.ಸಂ. ೫೫,೫೭.

೮. ಇಬ್ರಾಹಿಂ ಸಈದ್, ತಪ್ಪು ಕಲ್ಪನೆಗಳು (ಆಚಾರ ಸಂಪ್ರದಾಯಗಳು : ಪರದಾ) ಶಾಂತಿ ಪ್ರಕಾಶನ, ೧೯೯೩, ಪು.ಸಂ. ೫೮.

೯. ಡಾ. ಷಹಸೀನಾ ಬೇಗಂ, ಕರ್ನಾಟಕ ಮುಸ್ಲಿಂ ಜಾನಪದ, (ನಂಬಿಕೆಗಳು) ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೦, ಪು.ಸಂ ೫೬.

೧೦. ಡಾ. ಹಿರಣ್ಮಯ, ಮುಸ್ಲಿಂ ಉತ್ಸವಗಳು ಮತ್ತು ಸಂಸ್ಕಾರಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು ೧೯೭೧, ಪು.ಸಂ. ೪೦.

೧೧. ಡಾ. ಹಿರಣ್ಮಯ, ಮುಸ್ಲಿಂ ಉತ್ಸವಗಳು ಮತ್ತು ಸಂಸ್ಕಾರಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು ೧೯೭೧, ಪು.ಸಂ. ೪೨.

೧೨. ಡಾ. ಹಿರಣ್ಮಯ, ಮುಸ್ಲಿಂ ಉತ್ಸವಗಳು ಮತ್ತು ಸಂಸ್ಕಾರಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು ೧೯೭೧, ಪು.ಸಂ. ೪೩.

೧೩. ಡಾ. ಹಿರಣ್ಮಯ, ಮುಸ್ಲಿಂ ಉತ್ಸವಗಳು ಮತ್ತು ಸಂಸ್ಕಾರಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು ೧೯೭೧, ಪು.ಸಂ. ೩೪.

೧೪. ಡಾ. ಹಿರಣ್ಮಯ, ಮುಸ್ಲಿಂ ಉತ್ಸವಗಳು ಮತ್ತು ಸಂಸ್ಕಾರಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು ೧೯೭೧, ಪು.ಸಂ. ೫೧.

೧೫. ಕಾವೇರಿ ಪಿ.ಸಾಗರ್, ಗುಲ್ಬರ್ಗಾ ಕೊಳಚೆ ಪ್ರದೇಶದ ಮಹಿಳಾ ಬದುಕು, ಅಪ್ರಕಟಿತ ಸಂಬಂಧ, ಮಹಿಳಾ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

* * *

## ಅಧ್ಯಾಯ : ನಾಲ್ಕು

# ಮುಸ್ಲಿಂ ಮಹಿಳೆಯ ವಿವಾಹ ಪದ್ಧತಿಗಳು

೪.೧. ಸಾಂಪ್ರದಾಯಿಕ ವಿವಾಹ ಸ್ವರೂಪ

೪.೨. ಮುಸ್ಲಿಂ ಮಹಿಳೆಯ ವಿವಾಹದ ನಿಯಮಗಳು

೪.೨.೧. ವಿವಾಹ ನಿಯಮಗಳು

೪.೨.೨. ವಿವಾಹ ಬಗೆಗಳು

೪.೩. ಮುಸ್ಲಿಂ ವಿವಾಹ ಕಾನೂನು

೪.೩.೧. ವಿವಾಹಕ್ಕೆ ಷರತ್ತುಗಳು

೪.೩.೨. ಮೆಹರ್

೪.೪. ವಿಚ್ಛೇದನ

೪.೪.೧. ತಲ್ಲಾಖ್

೪.೪.೨. ಖುಲಾ

# ಅಧ್ಯಾಯ : ನಾಲ್ಕು

## ಮುಸ್ಲಿಂ ಮಹಿಳೆಯ ವಿವಾಹ ಪದ್ಧತಿಗಳು

### ೪.೧. ಸಾಂಪ್ರದಾಯಿಕ ವಿವಾಹ ಸ್ವರೂಪ

ಆದಿಮಾನವನಿಗೆ ಕುಟುಂಬ ಮತ್ತು ವಿವಾಹದ ಪರಿಕಲ್ಪನೆ ಇರಲಿಲ್ಲ. ಪ್ರಾಣಿಗಳಲ್ಲಿರುವಂತೆ ಮಾನವನಿಗೆ ಕೂಡ ಲೈಂಗಿಕ ಪ್ರವೃತ್ತಿ ಜೀವನದ ನಿರಂತರತೆಗೆ ಸಂತಾನಾಭಿವೃದ್ಧಿಗೆ ಕಾರಣವಾಗಿತ್ತು. ಆದಿಮಾನವ ಒಂದೆಡೆ ನೆಲೆ ನಿಂತ ನಂತರ ಪ್ರಕೃತಿಯಲ್ಲಿರುವ ರಹಸ್ಯಗಳನ್ನು ಭೇದಿಸತೊಡಗಿದ, ಆಗ ಸಂಸ್ಕೃತಿ, ನಾಗರಿಕತೆ ಪ್ರಾರಂಭವಾಯಿತು. ಅದು ಸ್ತ್ರೀ ಪುರುಷರು ಒಂದೆಡೆ ನೆಲೆನಿಂತು ಜೊತೆಯಾಗಿ ಬಾಳಲು ನಾಂದಿಯಾಯಿತು. ವಂಶಾಭಿವೃದ್ಧಿಗೆ ಸಂತಾನ ಅನಿವಾರ್ಯ ಎನ್ನುವುದು ಪ್ರಕೃತಿ ನಿಯಮ, ಸಂತಾನೋತ್ಪತ್ತಿಗೆ ಲೈಂಗಿಕ ಕ್ರಿಯೆ ಕಾರಣ ವೈವಾಹಿಕ ಚೌಕಟ್ಟು ಸೃಷ್ಟಿಗೊಳ್ಳುವ ಮೊದಲು ಮಾನವನಿಗೆ ಅವಶ್ಯಕವಾಗಿ ಬೇಕಾದಂತಹ ಹಸಿವು, ನಿದ್ರೆಗಳಂತೆ, ಕಾಮ ಕೂಡ ಒಂದು ಶಾರೀರಿಕ ಅವಶ್ಯಕತೆಯಾಗಿತ್ತು. ದೈಹಿಕ ಮಾನಸಿಕವಾಗಿ ಪ್ರಬಲವಾದ ಹೆಣ್ಣನ್ನು ಹೇಗಾದರೂ ದಮನ ಮಾಡುವ ಹಂಬಲ ಪುರುಷರದು ಇತ್ತು.

ಪುರುಷ ಪ್ರಧಾನ ಸಮಾಜದಲ್ಲಿ ಮಹಿಳೆಯರನ್ನು ತಮ್ಮ ಹತೋಟಿಯಲ್ಲಿ ಇಟ್ಟುಕೊಳ್ಳುವುದಕ್ಕೋಸ್ಕರ ವಿವಾಹ ಎನ್ನುವ ಸಂಸ್ಥೆಯನ್ನು ರೂಪಿಸಿಕೊಂಡು, ವಿವಾಹ ಆದ ಮಹಿಳೆಯರನ್ನು ಸಂಪೂರ್ಣವಾಗಿ ತಮ್ಮ ಹತೋಟಿಯಲ್ಲಿ ಇಟ್ಟುಕೊಳ್ಳುವುದಕ್ಕಾಗಿ 'ಶೀಲ' ಎನ್ನುವ ಕಲ್ಪನೆಯನ್ನು ಸೃಷ್ಟಿಸುತ್ತಾರೆ.

ವಿವಾಹ ನಿಯಮಗಳಿಂದ ಅವಳ ಬದುಕಿನ ಧ್ಯೇಯದಲ್ಲಿಯೂ ಮತ್ತೆ ಅಬಲೆಯರ ಸ್ಥಿತಿ ಮುಂದುವರೆಯುತ್ತಿವೆ, ಮುಖ್ಯವಾಗಿ ಕುಟುಂಬದಲ್ಲಿ ಅವಳು ಮಗಳಾಗಿ, ತಾಯಿಯಾಗಿ ಮತ್ತು ಹೆಂಡಂತಿಯಾಗಿ, ಕುಟುಂಬದಲ್ಲಿ ಯಾವುದೇ ಹಂತದಲ್ಲಿ ಯಾವುದೇ ಪಾತ್ರದಲ್ಲಿ ಇದ್ದಾಗ ಸಹ ಈ ಅಬಲೆಯ ಸ್ಥಿತಿ ಹೋಗುವುದಿಲ್ಲ. ''ನ ಸ್ತ್ರೀ ಸ್ವಾತಂತ್ರ್ಯ ಮರ್ಹತಿ'' ಮಹಿಳೆ ಸ್ವಾತಂತ್ರ್ಯಕ್ಕೆ ಅರ್ಹಳಲ್ಲ, ಅಂದರೆ ಅವಳ ಅಬಲೆಯ ಸ್ಥಿತಿಯಿಂದ ಯಾವತ್ತು ತಪ್ಪಿಸಿಕೊಳ್ಳುವಂತಿಲ್ಲ.

ಮಹಿಳೆಯರನ್ನು ಗೃಹಕೃತ್ಯಗಳಿಗೆ ಸೀಮಿತಗೊಳಿಸಿದಾಗ ಗಂಡಿನ ಅಡಿಯಾಳಾಗಿ ಹೋದಳು, ಒಂದು ಕಡೆ ಮಹಿಳೆಯನ್ನು ದೇವರಿಗೆ ಹೋಲಿಸಿ ವೈಭವೀಕರಿಸಿದರೆ, ಇನ್ನೊಂದೆಡೆ ಅವಳ ಸ್ಥಾನ ಮಾನವನ್ನು ಕಸಿದುಕೊಂಡು ತನ್ನ ಅಧೀನದಲ್ಲಿ ಇಟ್ಟುಕೊಳ್ಳಲು ವಿವಾಹ ಎನ್ನುವ ಸಂಸ್ಥೆಯನ್ನು ಹುಟ್ಟು ಹಾಕಿದ ವಿವಾಹ ಬಂಧನವೂ ಗೃಹ ಬಂಧನವಾಗಿ ಮಾರ್ಪಾಡಾಯಿತು. ಗಂಡಿಗೆ ಹೆಣ್ಣನ್ನು ಒಪ್ಪಿಸುವಾಗ ಆಕೆಯ ಮನೆ ಆತನ ಇಡೀ ಕುಟುಂಬದ ಅಧಿಕಾರವನ್ನು ಸ್ಥಾಪಿಸುವಂತಹ ಒಂದು ವ್ಯವಸ್ಥೆಯನ್ನು ವಿವಾಹ ಸೃಷ್ಟಿಸುತ್ತದೆ, ವಿವಾಹಕ್ಕೆ ಸಂಬಂಧಿಸಿದ ಆಚರಣೆಗಳು ಸಾಮಾಜಿಕ ಮನ್ನಣೆಯನ್ನು ಪಡೆಯುತ್ತವೆ. ವಿವಾಹ ಸಂಬಂಧವನ್ನು ಪ್ರವೇಶಿಸಿದವರಿಗೆ ತಮ್ಮ-ತಮ್ಮ ಜವಾಬ್ದಾರಿಗಳನ್ನು ಕ್ರಮಬದ್ಧವಾಗಿ ಮಾಡಬೇಕಾಗುತ್ತದೆ. ಈ ಆಚರಣೆಗಳು ಸಹ ಸ್ತ್ರೀ ವಿರೋಧಿಗಳಾಗಿ ಹೆಣೆಯಲ್ಪಟ್ಟು ಸ್ತ್ರೀ ದಮನಕ್ಕೆ ಕಾರಣವಾಗಿವೆ.

ವಿವಾಹ ಸಂಬಂಧ ಮಹಿಳೆಯರನ್ನು ಕೌಟುಂಬಿಕವಾಗಿ ಆರ್ಥಿಕವಾಗಿ, ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ದುರ್ಬಲಳನ್ನಾಗಿಸುತ್ತದೆ. ವಿವಾಹ ಎನ್ನುವ ಸಂಸ್ಥೆ ಗಂಡು ಶ್ರೇಷ್ಠ ಹೆಣ್ಣು ಕನಿಷ್ಟ ಎಂಬ ಶ್ರೇಣಿಕರಣವನ್ನು ಹುಟ್ಟುಹಾಕುತ್ತದೆ. ದೇಹದ ೨ ಕಣ್ಣುಗಳಂತಿರುವ ಸ್ತ್ರೀ-ಪುರುಷರಲ್ಲಿ ಯಾವ ಕಣ್ಣು ಶ್ರೇಷ್ಠ ಎಂದು ತರ್ಕಿಸುವುದು ಮೂರ್ಖತನವಲ್ಲವೇ? ಮಹಿಳೆಗೆ ಸಮಾಜದಲ್ಲಿ ಗುರುತು ಹಾಗೂ ಅರ್ಥ ಪ್ರಾಪ್ತವಾಗುವುದೇ ವಿವಾಹದಿಂದ ಎಂದು ಹೇಳಲಾಗಿದೆ. ಮದುವೆ ಅನ್ನುವುದು ನಾಗರಿಕ ಜೀವನವನ್ನು ಅಲ್ಲೋಲ ಕಲ್ಲೋಲ ಮಾಡುತ್ತದೆ. ಹೆಣ್ಣಿಗೆ ಮದುವೆಯ ಸಮಸ್ಯೆಯಾದರೆ, ಮದುವೆಯಾಗದೆ ಉಳಿದರೂ ಕೂಡ ಸಮಾಜದಲ್ಲಿ ಅವಳು ಅನೇಕ ರೀತಿಯ ನಿಂದನೆಗೆ ಗುರಿಯಾಗುತ್ತಾಳೆ.

ಕುಟುಂಬ ಮತ್ತು ವಿವಾಹ ಸಂಸ್ಥೆಗಳು ಸಮಾಜದ ಮೂಲಭೂತ ಅವಶ್ಯಕ ಮತ್ತು ಅನಿವಾರ್ಯವಾಗಿರುವ ಸಾಜಿಕ ಸಂಸ್ಥೆಗಳು ಇವೆರಡು ಪರಸ್ಪರ ಪೂರಕವಾದವುಗಳು. ಕುಟುಂಬ ವ್ಯವಸ್ಥೆಗೆ ವಿವಾಹವೇ ಹೆಬ್ಬಾಗಿಲು. ಸ್ತ್ರೀ ಪುರುಷರಿಗೆ ಏರ್ಪಡುವ ಧಾರ್ಮಿಕ ಮತ್ತು ಸಾಮಾಜಿಕ ಸಂಬಂಧವು ಗಂಡು ಹೆಣ್ಣಿನ ವೈಯಕ್ತಿಕ ಹಿತಕ್ಕಾಗಿ ಜರುಗುವ ಸಂಯೋಗವೇ ವಿವಾಹ. ಮದುವೆಯ ಕಲ್ಪನೆಯಾಗಲಿ, ವ್ಯವಸ್ಥೆಯಾಗಲಿ, ಇರದ ಜನ ಪ್ರಪಂಚದಲ್ಲಿ ಇರಲಾರರು. ಒಂದು ಗಂಡು ಪ್ರಾಣಿಯೋ, ಪಕ್ಷಿಯೋ ಯಾವುದಾದರೂ ಹೆಣ್ಣು ಪ್ರಾಣಿಯೊಂದಿಗೆ ಕೂಡಿಕೊಳ್ಳುವುದು, ಕೂಡಿಕೊಂಡ ನಂತರ ಜನಿಸಿದ ಮಂಗಳ ಪಾಲನೆಯ ಜವಾಬ್ದಾರಿಯನ್ನು ಒಟ್ಟಿಗೆ ನಿಭಾಯಿಸುವುದು ಒಟ್ಟಾಗಿ ಸೇರಿ ಕುಟುಂಬದಂತೆ ಜೀವನ ಸಾಗಿಸುವುದು, ಇದು ಪ್ರಕೃತಿ ಸಹಜವಾದ ಕ್ರಿಯೆ ಆದ್ದರಿಂದ ಇದು ಮಾನವ ಸಮಾಜಕ್ಕೆ ಮಾತ್ರ ಸೀಮಿತವಾಗಿಲ್ಲ ಎನ್ನಬಹುದು. ಕೂಡುವ, ಕೂಡಿ ಬಾಳುವ ಕಲ್ಪನೆ ಮನುಷ್ಯನಿಗಿಂತ ಹಳೆಯದು ಎಂದೆನಿಸುವುದು.[೧]

ಮದುವೆಯೆನ್ನುವುದು ಮಹಿಳೆಗೆ ಸಮಾಜದಲ್ಲಿ ಬಂಧನವಿದ್ದ ಹಾಗೆ ಜಗತ್ತಿನ ಭಿನ್ನ ಭಿನ್ನ ಸಮಾಜಗಳ ಸಂಸ್ಕೃತಿಗಳಲ್ಲಿ ವಿವಾಹವು ಸಮಾಜದ ವೈಯಕ್ತಿಕ ಅವಶ್ಯಕತೆಗಳು ಮತ್ತು ಅನುಕೂಲಗಳನ್ನು ಅವಲಂಬಿಸಿದೆ. ಹೆಣ್ಣು ಅಧೀನಳಾಗಿರುವುದಕ್ಕೆ ಲೈಂಗಿಕತೆ ಪ್ರಮುಖ ಕಾರಣ ಪ್ರತ್ಯಕ್ಷವಾಗಿ ಇಲ್ಲವೆ ಪರೋಕ್ಷವಾಗಿ ಪುರುಷ ಪ್ರಧಾನತೆ ಹೆಣ್ಣಿನ ದೇಹದ ಮೇಲೆ ಪ್ರಭುತ್ವ ಸಾರಿದೆ. ದೇಹ ಹೆಣ್ಣಿನದಾದರೂ ಸಹ, ಪುರುಷ ಅದರ ಮೇಲೆ

ಅಧಿಕಾರ ಸ್ಥಾಪಿಸಿದ್ದಾನೆ. ಯಾವ ನೈತಿಕ ನೆಲೆಗಳಲ್ಲಿ ಹೆಣ್ಣಿನ ಬದುಕು ಇರಬೇಕು ಎಂದು ಈ ಸಮಾಜ ನಿರ್ಧರಿಸಿದೆಯೋ ಅದೇ ನೆಲೆಗಳಲ್ಲಿಯೇ ಅವಳನ್ನು ನುಚ್ಚು ನೂರು ಮಾಡಿ ಬಿಡುವುದರ ಮೂಲಕವೇ ಅವಳನ್ನು ಸಂಪೂರ್ಣ ಹಿಡಿತಕ್ಕೆ ಪುರುಷ ಷಾಹಿ ವ್ಯವಸ್ಥೆ ತಂದುಕೊಳ್ಳುತ್ತದೆ. ಹೆಣ್ಣಿನ ಲೈಂಗಿಕ ಅಸ್ತಿತ್ವವೇ ಮೂಲವಾಗಿ ಅದನ್ನು ಅವಳ ಅಸ್ತಿತ್ವದ ಕೇಂದ್ರವಾಗಿ ಮಾಡುವುದರ ಮೂಲಕ ಸಾಮಾಜಿಕ ವ್ಯವಸ್ಥೆ ರೂಪುಗೊಳ್ಳುತ್ತದೆ. ಹೆಣ್ಣಿನ ಇಡೀ ಬದುಕನ್ನು ಸಾಮಾಜಿಕ ನಿಯಂತ್ರಣಕ್ಕೆ ಒಳಪಡಿಸುವ ಪ್ರಯತ್ನ ಮಾಡಲಾಗಿದೆ.

ಮಹಿಳೆಯ ಶರೀರವನ್ನು ಪುರುಷರ ಸ್ವಾಮ್ಯಕ್ಕೆ ಒಳಪಡಿಸುವ ಸಲುವಾಗಿ ಪುರುಷ ಪ್ರಧಾನತೆಯು ವಿವಾಹ ಎನ್ನುವ ಸಂಸ್ಥೆಯನ್ನು ಹುಟ್ಟು ಹಾಕಿತು. ಮಹಿಳೆಯ ಲೈಂಗಿಕತೆಯನ್ನು ನಿಯಂತ್ರಿಸಲು ಹಾಗೂ ಈ ಸಂತಾನ ಈ ವ್ಯಕ್ತಿಯದೇ ಎಂದು ಗುರ್ತಿಸಲು ವಿವಾಹ ಉಗಮವಾಯಿತು ವಿವಾಹದ ನಂತರ ಮನೆ, ಕುಟುಂಬ, ಸಂತಾನೋತ್ಪತ್ತಿ, ಎಂಬ ಪರಿಮಿತ ವಲಯದಲ್ಲಿ ಹೆಣ್ಣು ಬದುಕು ಸಿಲುಕಿ ಹೋಯಿತು.

ವಿವಾಹ ಎನ್ನುವ ವ್ಯವಸ್ಥೆಯಿಂದ ಮಹಿಳೆಗೆ ವಿವಾಹದ ಮೊದಲಾಗಲಿ ವಿವಾಹದ ನಂತರವಾಗಲಿ, ತನ್ನದು ಎಂಬ ನೆಲೆ ಇಲ್ಲದಂತಾಗಿ ತಂದೆಯ ಗಂಡನ ಆಶ್ರಯದಲ್ಲಿ ಅವಳ ಬದುಕು ಅತಂತ್ರ ಹಾಗೂ ಅಭದ್ರತೆಯ ಸ್ಥಿತಿಯಲ್ಲಿರುತ್ತದೆ. ವಿವಾಹ ಎನ್ನುವ ಪದ್ಧತಿಯ ಸ್ತ್ರೀಯರನ್ನು ನಿರ್ಗತಿಕಳನ್ನಾಗಿಸುತ್ತದೆ. ಎಲ್ಲಿ ಹೋದರೂ ಅವಳ ಗೃಹಿಣಿ ಎನ್ನುವ ಸ್ಥಾನ ಪಡೆದುಕೊಂಡ ನಂತರ ಹೆಂಡತಿ, ಸೊಸೆ, ತಾಯಿ ಎಂಬ ವಿವಿಧ ಪಾತ್ರದಲ್ಲಿ ಕಾಣಿಸಿಕೊಳ್ಳುತ್ತಾಳೆ.

ಲೈಂಗಿಕತೆಯನ್ನು ಒಬ್ಬ ಗಂಡಸಿನ ಯಜಮಾನಿಕೆಗೆ ಒಳಪಡಿಸುವ ವಿವಾಹ ಸಂಸ್ಥೆಯ ಮೂಲದಿಂದಲೇ ಎಲ್ಲಾ ಸಮಸ್ಯೆಗಳನ್ನು ಹುಟ್ಟುಹಾಕುತ್ತದೆ. ಹೆಣ್ಣಿನ ಲೈಂಗಿಕತೆಯ ನಿರ್ಭಂಧ ಮಾತ್ರದಿಂದಲೇ ಅವಳ ಮೇಲೆ ಹಲವು ಬಗೆಯ ನಿಯಂತ್ರಣ ಹಾಗೂ ಹತೋಟಿಗಳನ್ನು ಸಾಧಿಸಲಾಗಿದೆ ಎಂಬುದಂತೂ ವಿವಾಹವೂ ರೂಪಿಸಿದ ಹುನ್ನಾರಗಳ ಪರಮಾವಧಿ ಹಂತವಾಗಿದೆ.

ಲೈಂಗಿಕತೆಗೆ ಸಂಬಂಧಿಸಿದಂತೆ ಶೀಲ ಎಂಬ ಪದ ಹೆಣ್ಣಿಗಷ್ಟೇ ಅನ್ವಯಿಸುವ ಸಾಮಾಜಿಕ ನಿಯಮವಾಗಿದೆ. ಲೈಂಗಿಕತೆಯಲ್ಲಿ ಗಂಡನಿಗೆ ಇಂತಹ ನಿಯಮವೇನೂ ಇಲ್ಲ. ಹೆಂಡತಿಯ ಶೀಲ ಪತಿ ನಿರೀಕ್ಷಿಸುತ್ತಾನಾದರೂ ಗಂಡನಿಗೆ ಅವೆಲ್ಲಾ ಅನ್ವಯವಾಗುವುದಿಲ್ಲಾ ವಿವಾಹೇತರ ಸಂಬಂಧಗಳನ್ನು ಇಟ್ಟುಕೊಂಡರೆ ಗಂಡನಿಗೆ ಸಮಾಜದಲ್ಲಿ ಮನ್ನಣೆಯಿದೆ. ಅವನು ಸಮಾಜದಲ್ಲಿ ಯಾವುದೆ ತರಹದ ಶಿಕ್ಷೆಗೆ ಗುರಿ ಆಗುವುದಿಲ್ಲ. ಹೆಣ್ಣೊಬ್ಬಳು ಲೈಂಗಿಕತೆಯು ವಿವಾಹ ಎಂಬ ನಿಯಮದಾಚೆಗೆ ಬಳಕೆಗೊಳ್ಳಬಾರದೆಂಬ ಕಟ್ಟಳೆಗಳನ್ನು ಪುರುಷನು ವಿಧಿಸಿದನು. ಆಕಸ್ಮಾತ್ತಾಗಿ ಹೆಣ್ಣಿನ ಲೈಂಗಿಕತೆಯು ವಿವಾಹದ ಪರಿಧಿಯಾಚೆಗೆ ಬಳಕೆಗೊಂಡರೆ ಅದು ಅನೈತಿಕತೆ ಆಗುತ್ತದೆ.

ಪುರುಷರ ಪ್ರಾಬಲ್ಯ ಬೆಳೆದಂತೆ ಸ್ತ್ರೀಯರ ಬದುಕಿನಲ್ಲಿ ನಿಯಂತ್ರಣ ಹಾಗೂ ಅಧೀನತೆಗಳೆಂಬ ಲಕ್ಷಣಗಳು ಕಾಣಿಸಿಕೊಂಡವು ತನ್ನ ಸಂತಾನಕ್ಕೆ ಅಗೋಚರವಾಗಿದ್ದ ಪಿತೃ ಸ್ಥಾನವನ್ನು ಕೊಡಿಸುವ ಸಲುವಾಗಿ ಹಾಗೂ ತನ್ನ ಸಂತಾನದ ಮೇಲೆ ಹಕ್ಕನ್ನು ಸ್ಥಾಪಿಸುವ ಸಲುವಾಗಿ ವಿವಾಹವೆಂಬ ಸಂಸ್ಥೆಯನ್ನು ಸ್ಥಾಪಿಸಿದ ಅವಳ ಸುತ್ತಲೂ ಸಾಮಾಜಿಕ ನಿಯಂತ್ರಣದ ಬೇಲಿಯನ್ನು ಹಾಕಲಾಯಿತು. ನಿಯಂತ್ರಣದ ಮುಖ್ಯ ಬೇಲಿ ವಿವಾಹವೆಂಬ ಸಂಸ್ಥೆ

ಈ ವಿವಾಹ ಎಂಬ ಸಂಸ್ಥೆಯು ೨ ಉದ್ದೇಶವನ್ನು ಒಳಗೊಂಡಿದೆ. ಮೊದಲನೆಯದು ಮೂಲಭೂತವಾಗಿ ನಾಗರಿಕರ ಮಧ್ಯೆ ನಡೆಯುವ ಲೈಂಗಿಕ ಪೈಪೋಟಿ, ಕದನಗಳನ್ನು ನಿಯಂತ್ರಿಸುವ ಸಲುವಾಗಿ ಹೆಣ್ಣುಗಂಡುಗಳ ನಡುವೆ ಲೈಂಗಿಕ ಬದುಕಿಗೆ ಸಾಮಾಜಿಕ ಚೌಕಟ್ಟನ್ನು ರೂಪಿಸುವ ಉದ್ದೇಶ.[೨]

ಮುಸ್ಲಿಂ ಮಹಿಳೆಯ ವಿವಾಹದ ಸಮಸ್ಯೆಗಳು, ನಿಯಮಗಳು ಬಗೆಗಳು ವಿಚ್ಛೇದನ, ಮಹರ್ ಬಗ್ಗೆ ಈ ಮುಂದಿನಂತೆ ಪರಾಮರ್ಶೆಗೆ ಒಳಪಡಿಸಿದ್ದೇನೆ.

ಮುಸ್ಲಿಂ ವಿವಾಹವು ಸಾಮಾಜಿಕ ಹಾಗೂ ವ್ಯಕ್ತಿಯ ಜೀವನವನ್ನು ನಿಯಂತ್ರಿಸುತ್ತದೆ. ಸಮಾಜದ ಸುವ್ಯವಸ್ಥೆಯ ದೃಷ್ಟಿಯಿಂದ ಮುಸ್ಲಿಂರಲ್ಲಿ ವಿವಾಹವು ಕಡ್ಡಾಯವಾಗಿದೆ. ತಂದೆ ತಾಯಿಯು ಒಪ್ಪಿಗೆ ಪಡೆದು ಖುರಾನ್ ಸಮ್ಮತವಾದ ಹಾಗೂ ನ್ಯಾಯಬದ್ಧವಾದ ವಿವಾಹಕ್ಕೆ ಇಲ್ಲಿ ಅವಕಾಶವಿದ್ದು, ವಿವಾಹವಾಗುವವರು ಇಲ್ಲಿ ಮುಖ್ಯವಾಗಿ ಆರೋಗ್ಯವಾಗಿದ್ದು, ಉತ್ತಮ ಶಾರೀರಿಕ ಬೆಳವಣಿಗೆಯನ್ನು ಹೊಂದಿರಬೇಕಾಗುತ್ತದೆ. ಅಂತೆಯೇ ಒಂದು ದೃಷ್ಟಿಯಲ್ಲಿ ಮುಸ್ಲಿಂ ವಿವಾಹವು ಬೆಳವಣಿಗೆಯನ್ನು ಹೊಂದಿರಬೇಕಾಗುತ್ತದೆ.

ಅಂತೆಯೇ ಒಂದು ದೃಷ್ಟಿಯಲ್ಲಿ ಮುಸ್ಲಿಂ ವಿವಾಹವು ಸಾಮಾಜಿಕ ಕರಾರು ಇಲ್ಲವೆ ಒಪ್ಪಂದವಾದರೆ ಇನ್ನೊಂದರ್ಥದಲ್ಲಿ ಇದು ಧಾರ್ಮಿಕತೆಯ ಅಂಶವನ್ನು ಪ್ರತಿಪಾದಿಸುತ್ತದೆ ಎನ್ನಬಹುದು. ಮುಸ್ಲಿಂ ವಿವಾಹಗಳಲ್ಲಿ ಇತರ ಪಂಗಡಗಳಲ್ಲಿ ಇರುವಂತೆ ಕೆಲವು ಶಾಸ್ತ್ರಗಳು ಇರುತ್ತವೆ, ಬೇರೆ ಸಮುದಾಯದಲ್ಲಿ ಸಂಪ್ರದಾಯ, ಆಚರಣೆ, ಸಂತೋಷ ಸಮಾರಂಭ ಇರುವಂತೆ ಇಸ್ಲಾಂ ಧರ್ಮದಲ್ಲಿಯೂ ಕೂಡ ಕಾಣಬಹುದು. ಮುಸ್ಲಿಂ ವಿವಾಹದಲ್ಲಿ ನಿಖಾ ಮತ್ತು ವಲಿಮಾ ಅನಿವಾರ್ಯ ಅಂಶಗಳು. ಆಯಾ ಜಾತಿ, ಪಂಗಡ, ಪ್ರದೇಶಗಳ ಪರಿಣಾಮಗಳಿಂದ, ಪ್ರಭಾವಗಳಿಂದ ಪದ್ಧತಿಗಳು ವಿಭಿನ್ನ ವ್ಯತ್ಯಾಸ ಉಂಟು, ಮುಸ್ಲಿಂ ವಿವಾಹದಲ್ಲಿ ವೈವಿಧ್ಯತೆಯನ್ನು ಕಾಣಬಹುದು.

ಮುಸ್ಲಿಂ ವಿವಾಹವು ಸಹ ಸಾಮಾಜಿಕ ಮನ್ನಣೆ ಪಡೆದುಕೊಂಡಿದೆ. ಮುಸ್ಲಿಂರಲ್ಲಿ ವಿವಾಹವು ಅನಿವಾರ್ಯವೂ ಹೌದು, ಹಾಗೂ ಸಾಮಾಜಿಕ ಒಪ್ಪಂದವೂ ಹೌದು. ಎಲ್ಲಾ ಧರ್ಮಗಳಲ್ಲಿ ಇರುವಂತೆ ವಿವಾಹಕ್ಕೆ ಪ್ರಾಮುಖ್ಯತೆಯನ್ನು ಕೊಡುತ್ತಾರೆ. ಅವಕಾಶವನ್ನು ತಂದುಕೊಡುವ ಸಮಾರಂಭ ಇದನ್ನು ಇಸ್ಲಾಂನಲ್ಲಿ ಕಡ್ಡಾಯಗೊಳಿಸುವ ಪದ್ಧತಿ.

ನಿಖಾ ಆಗುವ ಸಂದರ್ಭದಲ್ಲಿ ವಧು ವರರ ಒಪ್ಪಿಗೆಪಡೆದು. ಆಗ ವಧು ಒಳಗಡೆ ಇರುತ್ತಾಳೆ. ಇಬ್ಬರು ಪ್ರತಿನಿಧಿಗಳು ಒಳಗಡೆ ಹೋಗಿ ಅವಳೊಪ್ಪಿಗೆ ಪಡೆದು ಅಂದರೆ ವಧು 'ಖಬೂಲ್' ಎಂದು ಹೇಳಿ ರಿಜಿಸ್ಟರ್‌ನಲ್ಲಿ ಸಹಿ ಹಾಕಿಸಿಕೊಳ್ಳುತ್ತಾರೆ, ಅಲ್ಲಿ ನೆರೆದಂತಹ ಸಮಾಜದ ಎದುರು ವರ ನನಗೆ ಒಪ್ಪಿಗೆ ಆಗಿದೆ. ಎಂದು ೨ ಬಾರಿ ಹೇಳಬೇಕು. ಇಸ್ಲಾಂ ಧರ್ಮವು ಪ್ರತಿಯೊಬ್ಬ ಮುಸ್ಲಿಂನಿಗೂ ವಿವಾಹವನ್ನು ಕಡ್ಡಾಯಗೊಳಿಸಿದೆ. ಮಹ್ಮದ್ ಪೈಂಗಬರ್‌ರು ಬ್ರಹ್ಮಚರ್ಯವನ್ನು ಖಂಡಿಸಿದ್ದಾರೆ ಎಂದು ಒಬ್ಬ ಮುಲ್ಲಾಅವರು ಕ್ಷೇತ್ರಕಾರ್ಯದಲ್ಲಿ ಈ ವಿವರಣೆಯನ್ನು ಹೇಳಿದರು.

ಹಿಂದೂಗಳಲ್ಲಿ ಗಂಡಸೇ ವಧುವಿಗೆ ತಾಳಿ ಕಟ್ಟುವುದುಂಟು ಆದರೆ ಮುಸ್ಲಿಂರಲ್ಲಿ ಹಾಗೆ ಇಲ್ಲಾ, ಈ ಪದ್ಧತಿಗೆ ಹೆಚ್ಚಿಗೆ ಪ್ರಾಧಾನ್ಯತೆ ಇಲ್ಲ. ವರ ಎಲ್ಲಾರ ಸಮಕ್ಷಮದಲ್ಲಿ ಒಪ್ಪಿಗೆಯನ್ನು ನೀಡಬೇಕಾಗುತ್ತದೆ. ಒಪ್ಪಿಗೆಯ ಪ್ರಮುಖವಾದ ಅಂಶ.

ಮುಸ್ಲಿಂರಲ್ಲಿ ಸಾಮಾನ್ಯವಾಗಿ ಹುಡುಗಿಯ ಮನೆಯೆದುರು ಮದುವೆ ನಡೆಯುತ್ತದೆ. ಎರಡು ದಿನಗಳ ಮುಂಚೆಯೇ ಪದ್ಧತಿಯಂತೆ ಎತ್ತಿಕಟ್ಟಿದ ಮಂಟಪಕ್ಕೆ ಶಕ್ತ್ಯಾನುಸಾರ ಅಲಂಕಾರ ಮಾಡಲಾಗುತ್ತದೆ. ನಿಕಾಃಕ್ಕೆ ಒಂದೆರಡು ಗಂಡೆ ಮೊದಲು ಹುಡುಗಿಯ ಸೋದರರು ತಮ್ಮ ಸ್ನೇಹಿತರನ್ನು ಕೂಡಿಕೊಂಡು ವರನ ಬಟ್ಟೆ ಅಲಂಕಾರಗಳನ್ನು ತಟ್ಟೆಯಲ್ಲಿ ಹೊತ್ತು ವರನ ಮನೆಗೆ ಹೋಗುತ್ತಾರೆ.

ಸುಗಂಧ ದ್ರವ್ಯಗಳನ್ನು ಹಚ್ಚಿ ಸ್ನಾನವಾದ ಮೇಲೆ ವರನನ್ನು ಬಟ್ಟೆ ಅತ್ತರು ಹೂಹಾರ, ಕೆಂಪು ಬಟ್ಟೆಯ ತೋಳಬಂದಿ, ಕೊಬ್ಬರಿ ಗಿಟುಕು ಇಟ್ಟು ಕಟ್ಟಿದ ಸೊಂಟಪಟ್ಟಿ, ಮುಖ ಪೂರ್ತಿ ಮುಚ್ಚುವಂತಿರುವ ಹೂವಿನ ಸೆಹರಾ ಇತ್ಯಾದಿಗಳಿಂದ ಶೃಂಗರಿಸುತ್ತಾರೆ. ಅನಂತರ ಅಲಂಕೃತ ಜೀಪಿನಲ್ಲಿ ಇಲ್ಲವೆ ಕುದುರೆಯ ಮೇಲೆ ವರನು ಆ ಓಣಿಯ ಮಸೀದಿಗೆ ಹೋಗಿ ನಮಾಜು ಮಾಡುತ್ತಾನೆ. ಅಲ್ಲಿಂದ ಮೆರವಣಿಗೆ ವಧುವಿನ ಮನೆಗೆ ಮುಟ್ಟಿದಾಗ ಆಹ್ವಾನಿತರೆಲ್ಲ ಮಂಟಪದಲ್ಲಿ ನೆರೆದಿರುತ್ತಾರೆ. ಮಧ್ಯಭಾಗದಲ್ಲೊಂದು ವೇದಿಕೆ ಇರುತ್ತದೆ. ಅಲ್ಲಿ ಖಾಜಿಗಳು ಮುಹಲ್ಲಾದ ಮುಂದೆ ದಾಖಲು ರಿಜಿಸ್ಟ್ರಿಯನ್ನು ಹಿಡಿದು ಕೂತಿರುತ್ತಾರೆ. ಅಲ್ಲಿಯೇ 'ಮೆಹರ್'ನ ನಿರ್ಣಯ ಆಗುತ್ತದೆ. ಮೆಹರ್ ಎಂದರೆ ಒಂದು ರೀತಿಯ ವರದಕ್ಷಿಣೆ, ವಧುವಿನ ಸ್ವಂತ ಬಳಕೆಗಾಗಿ ಕೊಡುವಿನ ಹಣ ವಿವಾಹ ವಿಚ್ಛೇದನವೇನಾದರೂ ಆದರೆ ಆ ಸಂದರ್ಭದಲ್ಲಿ ಕೂಡಲೇ ಕೊಡಬೇಕಾದ ಮೊತ್ತ. ಅವರವರ ಯೋಗ್ಯತಾನುಸಾರ ಇಷ್ಟು ಮೆಹರ್ ಎಂದು ನಿಶ್ಚಿಯವಾದ ಮೇಲೆಯೇ ಮುಂದಿನ ಕ್ರಮ ಜರುಗುತ್ತದೆ.

ಇಷ್ಟಾದ ಮೇಲೆ ಹಿರಿಯರೊಬ್ಬರು "ಲಚ್ಚಾ" (ಕರಿಮಣಿ) ಕೊಟ್ಟು ಮುತ್ತೈದೆಯೊಬ್ಬಳು ತೆಗೆದುಕೊಂಡು ವಧುವಿಗೆ ಕಟ್ಟುತ್ತಾಳೆ. ಇಸ್ಲಾಂನಲ್ಲಿ ತಾಳಿಕಟ್ಟುವ ಸಂಪ್ರದಾಯವಿಲ್ಲ. ಆದರೆ ಮುಸ್ಲಿಂರಲ್ಲಿ ಈ ಕ್ರಿಯೆಗೆ ಹೆಚ್ಚಿನ ಪ್ರಾಧಾನ್ಯತೆ ಇಲ್ಲ. ವರ ಎಲ್ಲರ ಸಮಕ್ಷಮದಲ್ಲಿ ಮದುವೆಗೆ ತನ್ನ ಒಪ್ಪಿಗೆಯನ್ನು ಸೂಚಿಸುವುದೇ ಅತಿ ಪ್ರಮುಖ ಅಂಶ. ಇದನ್ನೂ ವಧುವೂ ಕೇಳಬೇಕೆಂದು ಶಾಸ್ತ್ರ ವಿರುವುದರಿಂದ ವಧುವನ್ನು ಪರದೆಯ ಹಿಂದೆ ಆದಷ್ಟು ಹತ್ತಿರ ಕೂರಿಸುತ್ತಾರೆ.

ಈ ಸಮಯದಲ್ಲೇ ಕಲ್ಲು ಸಕ್ಕರೆ, ಖರ್ಜೂರ ಮತ್ತು ಕೊಬ್ಬರಿ ಚೂರು, ತೂರುವ ಸಂತಸದ ಕ್ರಿಯೆ ನಡೆಯುತ್ತದೆ. ಖಾಜಿಗಳೂ ಎಸೆದ ಇವು ಸಿಗುವುದೇ ಪುಣ್ಯ! ಅವಿವಾಹತರಿಗೆ ಸಿಕ್ಕಿದರೆ ಮದುವೆ ಯೋಗವೆಂಬ ನಂಬಿಕೆ!

ಮದುವೆಯಲ್ಲಿ ನಿಕಾದಂತೆಯೇ ವಲಿಮಾ ಕೂಡ ಕಡ್ಡಾಯವವೆಂದೇ ಹೇಳಬೇಕು. ವರ ಮತ್ತು ವಧುವಿನ ಕಡೆಯವರು ಪರಸ್ಪರರಿಗೆ ಮತ್ತು ನೆರೆಹೊರೆಯವರಿಗೆ ಔತಣ ಕೊಡುವುದೇ ವಲಿಮಾ.

ಮುಖ್ಯವಾದ ನಿಕಾಃ ಸಮಾರಂಭವೊಂದನ್ನು ಬಿಟ್ಟರೆ ಉಳಿದೆಲ್ಲ 'ರಸಂ'ಗಳಲ್ಲಿ ಸಾಕಷ್ಟು ಭಿನ್ನತೆಗಳು ಕಂಡುಬರುತ್ತವೆ. ಇವುಗಳಲ್ಲಿ ಆಯಾ ಪ್ರದೇಶಗಳಲ್ಲಿರುವ, ಮುಖ್ಯವಾಗಿ ಹಿಂದೂ ವಿವಾಹ, ಸಂಪ್ರದಾಯಗಳ ಪ್ರಭಾವ ಕಂಡುಬರುತ್ತದೆ. ಮದುವೆಗೆ ಮುಂಚೆ ನಿಶ್ಚಿತಾರ್ಥ ಹಳದಿ ಚೋಲಿ ಜಡೆ ರಸಂ ಮದುವೆ ಮಂಟಪ ಹಾಕುವ ರೀತಿ, ತಾಳಿ ಕಟ್ಟುವುದು, ನಿಕಾಃ ನಂತರದ ಮೆರವಣಿಗೆ, ಮದುವೆ ನಂತರ ನಡೆಯುವ ರಿವಾಜುಗಳು

ಇತ್ಯಾದಿಗಳೆಲ್ಲ ಇಸ್ಲಾಂನ ಸಮ್ಮತಿಗಿಂತ ಸುತ್ತಮುತ್ತಲಿನ ಸಂಸ್ಕೃತಿಯ ಪ್ರಭಾವದಿಂದಲೇ ಆವಿರ್ಭವಿಸಿರುವುದು ಹೆಚ್ಚಾಗಿ ಕಂಡುಬರುತ್ತದೆ.

**೪.೨. ಮುಸ್ಲಿಂ ಮಹಿಳೆಯ ವಿವಾಹದ ನಿಯಮಗಳು ಹಾಗೂ ಬಗೆಗಳು**

**೪.೨.೧. ನಿಯಮಗಳು**

**೧. ರಕ್ತ ಸಂಬಂಧಿಗಳಲ್ಲಿ ವಿವಾಹ ನಿಷೇಧ :**

ತುಂಬ ಹತ್ತಿರದ ಸಂಬಂಧಿಗಳನ್ನು ವಿವಾಹವಾಗುವುದಕ್ಕೆ ಇಸ್ಲಾಂ ಧರ್ಮದಲ್ಲಿ ನಿಷೇಧವಿದೆ. ಮುಸ್ಲಿಂನು ತನ್ನ ಮಗಳು, ಮೊಮ್ಮಗಳು, ತಾಯಿ, ಅಜ್ಜಿ, ಅತ್ತೆ, ಚಿಕ್ಕಮ್ಮ, ಸೊಸೆ, ಅಕ್ಕ, ತಂಗಿಯರ ಮಕ್ಕಳು ಮುಂತಾದವರೊಡನೆ ವಿವಾಹವಾಗುವಂತಿಲ್ಲ.

**೨. ಇಬ್ಬರು ಸೋದರಿಯರ ವಿವಾಹ ನಿಷೇಧ :**

ಇಸ್ಲಾಂ ಧರ್ಮದ ಪ್ರಕಾರ ಇಬ್ಬರು ಸೋದರಿಯರು ಏಕ ಕಾಲದಲ್ಲಿ ಒಬ್ಬನೆ ಪುರುಷನನ್ನು ವಿವಾಹವಾಗುವಂತಿಲ್ಲ. ಅವನು ತನ್ನ ಹೆಂಡತಿಯ ಮರಣಾನಂತರ ಅಥವಾ ಅವಳಿಗೆ ವಿಚ್ಛೆದನ ನೀಡಿದ ನಂತರವೇ ಸಾಧ್ಯ.

**೩. ಇದ್ದತ್ ಅವಧಿಯಲ್ಲಿ ವಿವಾಹ ನಿಷೇಧ :**

ವಿಚ್ಛೇದಿತ ಮಹಿಳೆಯು ಇನ್ನೊಂದು ವಿವಾಹವಾಗಲು ಇರುವ ನಿರೀಕ್ಷಣಾ ಅವಧಿಯನ್ನನು ಇದ್ದತ್ ಎಂದು ಕರೆಯಲಾಗಿದೆ. ವಿಧವೆ ಅಥವಾ ವಿಚ್ಛೇಧಿತ ಮಹಿಳೆಯರ ಪತಿಯ ಮರಣದ ನಂತರದಲ್ಲಿ ಅಥವಾ ವಿಚ್ಛೇಧನದ ನಂತರ ಕಾನೂನು ನಿಗದಿಗೊಳಿಸಿದ ಅವಧಿ (ಮೂರು ತಿಂಗಳು ಹತ್ತು ದಿನಗಳು ಇದ್ದತ್)ಗಿಂತ ಮುಂಚೆ ವಿವಾಹವಾಗುವಂತಿಲ್ಲ.

**೪. ವಿಚ್ಛೇಧಿತ ಪತ್ನಿಯ ಮರು ವಿವಾಹ :**

ವಿವಾಹ ವಿಚ್ಛೇಧನ ಪಡೆದ ಮಹಿಳೆಯು ಇದ್ದತ್ ಅವಧಿಮುಗಿದ ನಂತರ ಬೇರೊಬ್ಬ ಪುರುಷನೊಂದಿಗೆ ಮರು ವಿವಾಹವಾಗಬಹುದು. ಆದರೆ ವಿಚ್ಛೇದನ ನೀಡಿದ ಪತಿಯೇ ತತ್‌ಕ್ಷಣ ಆಕೆಯನ್ನು ಪುನಃ ವಿವಾಹವಾಗುವಂತಿಲ್ಲ. ಅವನು ಒಂದು ಪಕ್ಷಅವಳನ್ನು ವಿವಾಹವಾಗಬೇಕೆಂದು ಇಚ್ಛಿಸಿದಲ್ಲಿ ಆಕೆಯು ಇದ್ದತ್ ಅವಧಿ ಮುಗಿಸಿದ ಮೇಲೆ ಬೇರೊಬ್ಬ ಪುರುಷನನ್ನು ಒಂದು ದಿನದ ಮಟ್ಟಿಗಾದರೂ ವಿವಾಹವಾಗಬೇಕು. ನಂತರ ಅವನೊಂದಿಗೆ ವಿಚ್ಛೇದನ ಪಡೆದು. ಈ ಇದ್ದತ್ ಅವಧಿ ಮುಗಿದ ಮೇಲೆ ಮಾತ್ರ ಆಕೆಯನ್ನು ಮೊದಲಿನ ಗಂಡನನ್ನು ಪುನಃ ವಿವಾಹವಾಗಬಹುದು.

**೫. ಮುಸಲ್ಮಾನೇತರ ವಿವಾಹ ನಿಷೇದ :**

ಒಬ್ಬ ಮುಸಲ್ಮಾನನು ಮತ್ತೊಬ್ಬ ಮುಸಲ್ಮಾನಳನ್ನು ವಿವಾಹವಾಗಬೇಕು. ಒಂದು ವೇಳೆ ಬೇರೆಯವಳನ್ನು ವಿವಾಹವಾಗಬೇಕಾದರೆ 'ಕಿತಾಬಿಯಾ'ದಲ್ಲಿರುವ ಅಂದರೆ ಮೂರ್ತಿ ಪೂಜೆಯನ್ನು ಮಾಡದಿರುವ ಧರ್ಮಗಳ

ಪಟ್ಟಿಯಲ್ಲಿರುವ ಜ್ಯೂ ಅಥವಾ ಕ್ರೈಸ್ತ ಮಹಿಳೆಯನ್ನು ವಿವಾಹವಾಗಬಹುದು ಆದರೆ ಮುಸ್ಲಿಂ ಮಹಿಳೆಯರಿಗೆ ಈ ಅವಕಾಶವಿಲ್ಲ.

**೬. ಗುಲಾಮ ಸ್ತ್ರೀಯರೊಂದಿಗೆ ವಿವಾಹ ನಿಷೇಧ :**

ಗುಲಾಮ ಸ್ತ್ರೀಯರನ್ನು ಮುಸ್ಲಿಂನು ವಿವಾಹವಾಗುವಂತಿಲ್ಲ. ಆಕೆಯು ಒಂದು ಪಕ್ಷ ವಿವಾಹಕ್ಕೆ ಮುನ್ನ ಗುಲಾಮತನದಿಂದ ಬಿಡುಗಡೆಹೊಂದಿದಲ್ಲಿ ಮಾತ್ರ ವಿವಾಹವಾಗಲು ಯೋಗ್ಯರಾಗುವಳು.

**೭. ಗರ್ಭಿಣಿ ಸ್ತ್ರೀಯರೊಂದಿಗೆ ವಿವಾಹ ನಿಷೇಧ :**

ಮುಸ್ಲಿಂನು ಗರ್ಭಿಣಿ ಸ್ತ್ರೀಯನ್ನು ವಿವಾಹವಾಗುವ ಅವಕಾಶ ಇಸ್ಲಾಂ ಧರ್ಮದಲ್ಲಿಲ್ಲ. ಹುಟ್ಟುವ ಮಗುವಿನ ಪೋಷಕತ್ವದ ಸಮಸ್ಯೆಯನ್ನು ಬಗೆಹರಿಸಲು ಈ ನಿಷೇಧವು ಸಹಕಾರಿಯಾಗಿದೆ.[೩]

**೪.೨.೨. ಮುಸ್ಲಿಂ ವಿವಾಹದ ಬಗೆಗಳು**

ಮುಸ್ಲಿಂರಲ್ಲಿ ವಿವಾಹವು ವಿವಿಧ ಪಂಗಡಗಳಲ್ಲಿ ವಿವಿಧ ರೀತಿಯ ವಿವಾಹವನ್ನು ಆಚರಿಸುತ್ತಾರೆ. (ಶಿಯಾ, ಸುನ್ನಿ) ಪ್ರಮುಖ ವಿವಾಹದ ಬಗೆಗಳು ಈ ಕೆಳಗಿನಂತಿವೆ,

**೧. ಬೀನಾ ವಿವಾಹ:** ಈ ವಿವಾಹದಲ್ಲಿ ಸ್ತ್ರೀಗೆ ತನಗಿಷ್ಟ ಬಂದ ಗಂಡನನ್ನು ಆರಿಸಿಕೊಳ್ಳುವ ಸ್ವಾತಂತ್ರ್ಯವಿದೆ, ಹೀಗೆ ಆರಿಸಿಕೊಂಡ ಪತಿಯನ್ನು ಬೇಡವಾದಾಗ ತಿರಸ್ಕರಿಸುವ ಮೂಲಕ ಜನಿಸಿದ ಮಕ್ಕಳು ತಾಯಿಯ ವಂಶಕ್ಕೆ ಸೇರಿ, ಅವಳ ರಕ್ಷಣೆಯಲ್ಲಿಯೇ ಬೆಳೆಯುತ್ತಾರೆ.

**೨. ಬಾಲ್ ವಿವಾಹ:** ಬಾಲ್ ವಿವಾಹದಲ್ಲಿ ಪುರುಷನು ತನಗಿಷ್ಟವಾದ ಮಹಿಳೆಯನ್ನು ವಿವಾಹವಾಗುತ್ತಾನೆ. ಬೇಡವಾದಾಗ ಅವಳನ್ನು ವಿಚ್ಛೇದನ ಮಾಡುವ ಅಧಿಕಾರ ಅವನಿಗಿದೆ. ವಿವಾಹದ ನಂತರ ಹೆಂಡತಿಯು ತನ್ನ ಗಂಡನ ಮನೆಯಲ್ಲಿಯೇ ವಾಸಿಸುತ್ತಾಳೆ. ಇಲ್ಲಿ ಹೆಂಡತಿಯು ಗಂಡನಿಗೆ ಅಧೀನಳು. ಅವಳಿಗೆ ತನ್ನ ಬಾಳ ಸಂಗಾತಿಯರ ಆಯ್ಕೆಯಲ್ಲಾಗಲಿ ಅಥವಾ ಮತ್ತಾವುದೇ ಸ್ವಾತಂತ್ರ್ಯವಾಗಲಿ ಇರುವುದಿಲ್ಲ. ಮಕ್ಕಳು ತಂದೆಯ ವಂಶಕ್ಕೆ ಸೇರಿ, ಅವನ ಪೋಷಣೆಯಲ್ಲಿ ಬೆಳೆಯುತ್ತಾರೆ.

**೩. ಮೂತಾ ವಿವಾಹ:** ಯಾವುದೇ ಮಧ್ಯಸ್ಥಿಕೆಯಿಲ್ಲದೇ ಗಂಡು ಹೆಣ್ಣಿನ ಒಪ್ಪಂದದ ಮೇಲೆ ನಡೆಯುವ ವಿವಾಹವನ್ನು ಮುತಾ ವಿವಾಹ ಎನ್ನುವರು ಇದನ್ನು 'ಭೋಗ' ವಿವಾಹ ಎಂತಲೂ ಕರೆಯುತ್ತಾರೆ. ಇಲ್ಲಿ ಹೆಂಡತಿಗೆ ಗಂಡನ ಆಸ್ತಿಯ ಹಕ್ಕಾಗಲಿ ಅಥವಾ ಜೀವನಾಂಶದ ಹಕ್ಕಾಗಲಿ ಇರುವುದಿಲ್ಲ. ಈ ವಿವಾಹದಿಂದ ಜನಿಸಿದ ಮಕ್ಕಳು ಕಾನೂನುಬದ್ಧ ಮಕ್ಕಳೆನಿಸಿ, ತಂದೆಯ ಆಸ್ತಿಯ ಹಕ್ಕನ್ನೂ ಹೊಂದುತ್ತಾರೆ.

ಇಲ್ಲಿ ವೈವಾಹಿಕ ಸಂಬಂಧವು ನಿರ್ದಿಷ್ಟ ಕಾಲಕ್ಕೆ ಮಾತ್ರ ಸೀಮಿತವಾಗಿರುತ್ತದೆ, ಈ ಒಪ್ಪಂದಕ್ಕೆ ಮುಂಚೆ ಮಹರ್ ಅನ್ನು ನಿಗದಿಪಡಿಸಲಾಗುವುದು, ಈ ಒಪ್ಪಂದಕ್ಕೆ ಮುಂಚೆ 'ಮಹರ್' ಅನ್ನು ನಿಗದಿಪಡಿಸಲಾಗುವುದರ. ನಿಗದಿತ ಕಾಲಾವಧಿ ಮುಗಿದ ಮೇಲೆ ವೈವಾಹಿಕ ಸಂಬಂಧವು ಕೊನೆಗೊಳುತ್ತದೆ. ಈ ಅವಧಿಯೊಳಗೆ ಪುರುಷನು

ನಿಗದಿತ ಮಹರ್‌ನ ಮೊತ್ತವನ್ನು ನೀಡಬೇಕಾಗುತ್ತದೆ. ಈ ವಿವಾಹವು ಹೆಚ್ಚು ಬಳಕೆಯಲ್ಲಿಲ್ಲವೆಂದು ತಿಳಿದು ಬಂದಿದೆ.

೪. ನಿಕಾ ವಿವಾಹ : ಮುಸ್ಲಿಂ ರಲ್ಲಿ ನಿಕಾ ವಿವಾಹವು ಒಂದು ಸಾರ್ವತ್ರಿಕವಾಗಿ ಅಂಗೀಕೃತವಾದ ಮತ್ತು ಕಾನೂನು ಬದ್ಧವಾದ ವಿವಾಹ ಪದ್ಧತಿಯಾಗಿದೆ. ಈ ವಿವಾಹದಲ್ಲಿ ಮೊದಲು ವಧು-ವರರು, ಅವರ ಕಡೆಯ ಸಾಕ್ಷಿಗಳು ಹಾಗೂ ಬಂಧು ಮಿತ್ರರ ಸಮಕ್ಷಮ ಮೌಲ್ವಿಯ ಎದುರು ಸಹಿ ಹಾಕುತ್ತಾರೆ. ಇಲ್ಲಿ ವಿವಾಹಕ್ಕೆ ಮೊದಲು 'ಖುತ್ಬಾ'ವನ್ನು (ಕುರ್‌ಆನ್‌ನ ವಚನಗಳು) ಪಠಿಸಲಾಗುವುದು ವಿವಾಹದ ನಂತರ ಸ್ತ್ರೀಯು ತನ್ನ ಗಂಡನ ಮನೆಯಲ್ಲಿ ವಾಸಿಸುತ್ತಾಳೆ. ಮಕ್ಕಳು ತಂದೆಯ ವಂಶಕ್ಕೆ ಸೇರಿ ಕಾನೂನು ಬದ್ಧ ಮಕ್ಕಳಾಗುವರು ಇದನ್ನು ಬಹಳ ಶ್ರೇಷ್ಠವಾದ ವಿವಾಹದ ಪದ್ಧತಿಯೆಂದು ಮುಸ್ಲಿಂರು ನಂಬಿದ್ದಾರೆ.[೪]

**೪.೩. ಮುಸ್ಲಿಂ ವಿವಾಹ ಕಾನೂನು**

ಷರಿಯತ್ ಅಧಿನಿಯಮ ಮುಸ್ಲಿಂರಿಗೆ ಅನ್ವಯವಾಗುವುದು. ಮುಸ್ಲಿಂ ಕಾನೂನಿನಲ್ಲಿ ಸಂತಾನೋತ್ಪತ್ತಿಗಾಗಿ ಮಾಡಿಕೊಳ್ಳುವ ಒಂದು ಕರಾರು ಮಾತ್ರವಾಗಿರುತ್ತದೆ. ಮುಸ್ಲಿಂರಲ್ಲಿ ಸಹ ವಿವಾಹವಾಗಲು ನಿಷೇಧಿತವಾದ ವರ್ಗದ ಒಂದು ದೊಡ್ಡ ಪಟ್ಟಿಯೇ ಇರುತ್ತದೆ.

ಒಬ್ಬನೆ ವ್ಯಕ್ತಿಗೆ ವಿವಾಹವಾಗುವ ಇಬ್ಬರು ಮಹಿಳೆಯರಲ್ಲಿ ಒಬ್ಬ ಮಹಿಳೆಯು ನಿಷೇಧಿತ ವರ್ಗದಲ್ಲಿ ಬರುವ ಪುರುಷನೇ ಆಗಿದ್ದರೆ, ವಿವಾಹವಾಗಲು ಹೇಗೆ ಬರುತ್ತಿರಲಿಲ್ಲವೊ ಅಷ್ಟರ ಮಟ್ಟಿಗೆ ಹತ್ತಿರದ ಸಂಬಂಧಿಕರಾಗಿರಬಾರದು ಎನ್ನುತ್ತದೆ. ಮುಸ್ಲಿಂರಲ್ಲಿನ ಭಿನ್ನ ಪಂಗಡದವರು ಅಂತರ್ ವಿವಾಹಮಾಡಿಕೊಳ್ಳುವ ಅವಕಾಶವಿದೆಯಾದರೂ, ಮುಸ್ಲಿಂಯೇತರ ವ್ಯಕ್ತಿಯನ್ನೇ ವಿವಾಹವಾಗಲು ಹಲವಾರು ನಿರ್ಭಂಧಗಳಿರುತ್ತವೆ.

**೪.೩.೧. ವಿವಾಹಕ್ಕೆ ಷರತ್ತುಗಳು**

೧. ಒಂದು ಪಂಗಡದ ಕಡೆಯಿಂದ ವಿವಾಹಕ್ಕೆ ಪ್ರಸ್ತಾವನೆ ಅಗತ್ಯವಿರುತ್ತದೆ.

೨. ಎರಡನೇ ಅಥವಾ ಪಂಗಡದವರಿಂದ ಅಂಗೀಕಾರವಿರಬೇಕಾಗುತ್ತದೆ.

೩. ಅಂತಹ ವಿವಾಹಕ್ಕೆ ಇಬ್ಬರು ಗಂಡಸರು ಅಥವಾ ಒಬ್ಬ ಗಂಡಸು ಹಾಗೂ ಇಬ್ಬರು ಮಹಿಳಾ ಸಾಕ್ಷಿಗಳು ಹಾಜರಿರಬೇಕಾಗುತ್ತದೆ.

೪. ವಿವಾಹಕ್ಕೆ ಸಂಬಂಧಿಸಿದ ಪ್ರಸ್ತಾಪ ಮತ್ತು ಅಂಗೀಕಾರಗಳು ವಿವಾಹದ ಚರ್ಚೆಗೆಂದು ಏರ್ಪಡಿಸಿದ್ದ ಸಭೆಯಲ್ಲಿ ಏಕ ಕಾಲದಲ್ಲಿಯೇ ನಡೆಯಬೇಕಿರುತ್ತದೆ.

೫. ಇದಕ್ಕಾಗಿ ಬರವಣಿಗೆಯಾಗಲಿ ಅಥವಾ ಯಾವುದೇ ಧಾರ್ಮಿಕ ಸಂಪ್ರದಾಯಗಳ ಅಗತ್ಯವಿರುವುದಿಲ್ಲ.

೬. ಮುಸ್ಲಿಂರ ವಿವಾಹದಲ್ಲಿ ವಧುದಕ್ಷಿಣೆ ಕಡ್ಡಾಯವಿರುತ್ತದೆ. 'ವಧು - ದಕ್ಷಿಣೆ' ಎಂಬುದು ವಿವಾಹವಾಗುವ ಮಹಿಳೆ ತನ್ನ ಗಂಡನಿಂದ 'ಹಣ' ಅಥವಾ 'ಆಸ್ತಿ' ರೂಪದಲ್ಲಿ ವಿವಾಹ ಕಾಲದಲ್ಲಿ ಪಡೆಯುವ ವಸ್ತುವಾಗಿರುತ್ತದೆ. ಇಂಥ ವಧುದಕ್ಷಿಣೆಯನ್ನು ವಿವಾಹ ಕಾಲದಲ್ಲಿಯೇ ನಿರ್ಧರಿಸಬೇಕಿರುತ್ತದೆ.

೭. ಮುತಾ ವಿವಾಹ ಎಂಬುವುದು ಮುಸ್ಲಿಂರ ಕಾಯಿದೆಯಲ್ಲಿರುವ ಒಂದು ವಿಶೇಷ ಬಗೆಯ ವಿವಾಹವಾಗಿರುತ್ತದೆ. ಈ ಬಗೆಯ ವಿವಾಹವನ್ನು ಒಂದು ನಿರ್ದಿಷ್ಟ ಅವಧಿಗೆ ಮಾತ್ರ ವಿವಾಹದ ಸಂಬಂಧವನ್ನು ಪರಿಗಣಿಸಲಾಗುತ್ತದೆ. ಅಂತಹ ಅವಧಿಯು ತಾತ್ಕಾಲಿಕವಾಗಿರಬಹುದು ಅಥವಾ ದೀರ್ಘಕಾಲವಾಗಿರಬಹುದು. ಈ ಅವಧಿಯು ಎಷ್ಟು ಕಾಲದ್ದು ಎಂಬುವುದನ್ನು ವಿವಾಹದ ಸಂದರ್ಭದಲ್ಲಿ ತೀರ್ಮಾನಿಸಬೇಕಾಗುತ್ತದೆ. ಇದನ್ನು ಸೈನಿಕರು ಅಥವಾ ದೂರದವರೆಗಿನ ಪಯಣಿಗರು ಅನುಸರಿಸುತ್ತಾರೆ.

೮. ವಿವಾಹಿತರಲ್ಲಿ ಗಂಡ ಹೆಂಡಿರಂತೆ ಮುಂದುವರೆಯಲು ಸಾಧ್ಯವಾಗದೆ ಹೋದಾಗ ಗಂಡನಾದವನು ಹೆಂಡತಿಗೆ ತಲಾಖ್ ಎಂದು ೩ ಬಾರಿ ಹೇಳಿ ವಿಚ್ಛೇಧನಗೊಳಿಸಬಹುದು.

೯. ವಿವಾಹ ವಿಚ್ಛೇದನದ ನಂತರ ಪಕ್ಷಕಾರರು ಪುನರ್ ವಿವಾಹ ಮಾಡಿಕೊಳ್ಳಲು ಅವಕಾಶ ಇರುತ್ತದೆ.

೧೦. ವಿಚ್ಛೇದನಗೊಂಡ ಮಹಿಳೆ ಪುನರ್ ವಿವಾಹವಾಗುವ ಮೊದಲು ಇದ್ದತ್ ಪದ್ಧತಿಯನ್ನು ಅನುಸರಿಸಬೇಕು. ಅಂದರೆ ರಜಸ್ವತಿಯಾಗುವ ಮಹಿಳೆಯು ೩ ಮುಟ್ಟುಗಳ ಅವಧಿಯನ್ನು ಕಳೆಯಬೇಕಿರುತ್ತದೆ. ಅಥವಾ ಪತಿಯ ಮರಣದಿಂದ ವಿವಾಹ ಸಂಬಂಧ ಕಳೆದು ಪುನರ್ ವಿವಾಹವಾಗುವ ಮಹಿಳೆ ೪ ತಿಂಗಳು ೧೦ ದಿನಗಳು ಅವಧಿಯನ್ನು ಕಳೆಯಬೇಕಿರುತ್ತದೆ ಅಥವಾ ಅಂತಹ ಮಹಿಳೆ ಗರ್ಭಸ್ಥಳಾಗಿದ್ದರೆ ಅಂತಹ ಅವಧಿಯ ಪ್ರಸವದ ತನಕ ಮುಂದುವರೆಯುತ್ತದೆ.

೧೧. ಮುಸ್ಲಿಂ ಕಾನೂನಿನಿಂದ ಮನ್ನಿಸಲ್ಪಟ್ಟ ಇತರೆ ಕಾರಣಗಳ ಆಧಾರದ ಮೇಲೆ ಸಹ ವಿವಾಹವನ್ನು ರದ್ದುಗೊಳಿಸುವಂತೆ ನ್ಯಾಯಾಲಯಕ್ಕೆ ಅರ್ಜಿಸಲ್ಲಿಸಲು ಅವಕಾಶವಿರುತ್ತದೆ.

**೪.೩.೨. ಮೆಹರ್**

ಮುಸ್ಲಿಂ ಧರ್ಮದಲ್ಲಿ ಮೆಹರ್‌ಗೆ ಬಹಳ ಪ್ರಾಮುಖ್ಯತೆಯನ್ನು ನೀಡಿದೆ. ವಿವಾಹದ ಸಂದರ್ಭದಲ್ಲಿ ವರ ಅಥವಾ ವರನ ಕಡೆಯವರು ವಧು ಅಥವಾ ವಧುವಿನ ಕಡೆಯವರಿಗೆ ನೀಡುವ ಹಣದ ಮೊತ್ತವನ್ನು ಮೆಹರ್ ಎಂದು ಕರೆಯುತ್ತಾರೆ.

ಮೆಹರ್‌ನ ಮೊತ್ತ ಇಂತಿಷ್ಟು ಬಂದು ಹೇಳಿಲ್ಲ. ಅವರ ಸಾಮರ್ಥ್ಯಕ್ಕನುಗುಣವಾಗಿ ಕೊಡಬೇಕಾಗುತ್ತದೆ. ಮೆಹರ್ ಸಂದಾಯದಿಂದ ವಿವಾಹದ ಒಪ್ಪಂದವು ಪೂರ್ಣಗೊಳ್ಳುತ್ತದೆ. ಮೆಹರ್ ಹಣವನ್ನು ನಿಖಾ ಸಂದರ್ಭದಲ್ಲಿ ಸಂಪೂರ್ಣವಾಗಿ ಕೊಡಬೇಕಾಗುತ್ತದೆ. ಎಂಬ ನಿಯಮವಿದೆ. ಆದರೆ ವಾಸ್ತವಿಕವಾಗಿ ಇದನ್ನು ಬೇಕೆನಿಸಿದಾಗ ಪಡೆಯುತ್ತಾರೆ. ಕಾರಣ ಪತಿಯು ಪತ್ನಿಯನ್ನು ಹಿಂಸಿಸುವುದು ಕಿರುಕುಳ ಕೊಡುವುದು ಅಥವಾ ವಿನಾಕಾರಣ ವಿಚ್ಛೇದನ ನೀಡುವುದನ್ನು ತಡೆಗಟ್ಟುತ್ತದೆ. ಇದರಿಂದ ಇದು ಸಹಾಯಕವಾಗಿದೆ ಎನ್ನಬಹುದು.

ಈ ಶುಲ್ಕದಿಂದ ಮಹಿಳೆಗೆ ಭದ್ರತೆಯನ್ನು ಕೊಡುತ್ತದೆ. ಮೆಹರ್‌ನಿಂದ ವಿವಾಹ ಸಂಬಂಧದ ಭದ್ರತೆಯನ್ನು ಅವಲಂಬಿಸಿರುತ್ತದೆ. ಇದೊಂದು ಅನಿವಾರ್ಯ ಪದ್ಧತಿ. ವಿವಾಹವಾಗುವ ಸಂದರ್ಭದಲ್ಲಿ ಗಂಡ ಮೆಹರ್‌ಕೊಡದೆ ಇದ್ದರೆ ಆತನ ಮೇಲೆ ಆ ಮೆಹರ್ ಕೊಡುವ ಜವಾಬ್ದಾರಿ ಇರುತ್ತದೆ. ಕಡ್ಡಾಯವಾಗಿ ಕೊಡಬೇಕು ಎಂದು

ಮುಸ್ಲಿಂ ಕಾನೂನು ಹೇಳುತ್ತದೆ. ಮಹರ್ ಮೊತ್ತವನ್ನು ಮೊದಲೆ ನಿಗದಿಪಡಿಸದೇ ಇದ್ದಲ್ಲಿ ಸಾಮಾನ್ಯವಾಗಿ ನಿಗದಿಪಡಿಸಲಾಗುವ ಮೊತ್ತಕ್ಕೂ ಹೆಚ್ಚಿನ ಮೊತ್ತವನ್ನು ನಿಗದಿ ಪಡಿಸಲು ಕೇಳಬಹುದು.

ಮೆಹರ್ ವಸ್ತುರೂಪದಲ್ಲಿರಬಹುದು, ಇಲ್ಲವೇ ಹಣದ ರೂಪದಲ್ಲಿ ಕೊಡಬಹುದು. ವರನ ಸ್ವತಃ ದುಡಿಮೆಯ ಶ್ರಮವೂ ಉತ್ತಮ ವಧುಶುಲ್ಕವೆನಿಸಿಕೊಳ್ಳಬಹುದು. ಎಂದು ಕಾನೂನು ಹೇಳುತ್ತದೆ. ಶುಲ್ಕವನ್ನು ವಿವಾಹದ ಒಪ್ಪಂದದ ವೇಳೆಯಲ್ಲಿಯೇ ಕೊಡಬೇಕು. ವರ್ಷಗಳೂ ಕಳೆದರೂ ಪತ್ನಿಯ ಈ ಹಕ್ಕೇನೂ ಮಾಯವಾಗುವುದಿಲ್ಲ. ವಿಚ್ಛೇದನ ಪಡೆದ ನಂತರ ನಿಗದಿಪಡಿಸಿದ ಮೆಹರ್‌ನ ಮೊತ್ತವನ್ನು ಕೊಡುವಂತೆ ಮಹಿಳೆಯು ಒತ್ತಾಯಿಸಬಹುದು.

''ಇಸ್ಲಾಂ ಧರ್ಮವು ಮೆಹರ್ ಪದ್ಧತಿಯ ಮೂಲಕ ವಿವಾಹಿತ ಮಹಿಳೆಗೆ ಆರ್ಥಿಕ ಭದ್ರತೆ ಕಲ್ಪಿಸಿದೆ. ವಿಧವೆಯನ್ನು ಮದುವೆಯಾಗಿ ಆಕೆಯ ಮಕ್ಕಳನ್ನು ಚೆನ್ನಾಗಿ ಸಲುಹಬೇಕೆಂದು ಹೇಳಲಾಗಿದೆ. ಧರ್ಮ ಗ್ರಂಥ ಕುರಾನ್‌ನಲ್ಲಿಯ ಅನೇಕ ಉಲ್ಲೇಖಗಳು ಹೆಣ್ಣು ಮಕ್ಕಳಿಗೆ ಧಾರ್ಮಿಕ ಆಚರಣೆಗಳನ್ನು ಸಮಾನತೆ ಮತ್ತು ವಿವಾಹ ವಿಚ್ಛೇದನದ ಅನಿವಾರ್ಯವಾದಾಗ ಹಕ್ಕನ್ನು ಹೆಣ್ಣಿಗೂ ಕಲ್ಪಿಸಿದ್ದರೂ ಪುರುಷ ಪ್ರಭುತ್ವದ ಸ್ವಾರ್ಥವು ಈ ಅವಕಾಶಗಳನ್ನು ಮೊಟಕುಗೊಳಿಸಿದೆ.''

### ೪.೪. ವಿಚ್ಛೇದನ

ತಲತಲಾಂತರದಿಂದ 'ಪತಿಯೇ ಪರದೈವ' ಎಂದು ಭೋದಿಸುತ್ತಾ ಬಂದ ಪರಂಪರೆಯಲ್ಲಿ ಹೆಂಡತಿ ಗಂಡನಿಂದ ಬೇರೆಯಾಗಿ ಬದುಕುವ ಪರಿಕಲ್ಪನೆ ಊಹೆಗೂ ನಿಲುಕದ್ದಾಗಿತ್ತು. ಇಂದಿಗೂ 'ಗಂಡ ಬಿಟ್ಟವಳು' ಎಂದು ಮೊದಲಿಸಿಕೊಳ್ಳಲು ಯಾವ ಹೆಂಗಸೂ ಸಿದ್ಧಳಿರುವುದಿಲ್ಲ.

ಒಂದು ಕಾಲಕ್ಕೆ ಹೆಂಡತಿ ಮೊದಲಿಸಿಕೊಳ್ಳಲು ಯಾವುದೇ ತಪ್ಪಿಲ್ಲದೆ ತನ್ನ ಸ್ವಾರ್ಥಕ್ಕಾಗಿ ಗಂಡ ಅವಳನ್ನು ತ್ಯಜಿಸಿದ್ದರೂ ಆಕೆಯದೇ ತಪ್ಪಿರಬೇಕೆಂದು ಅನುಮಾನಿಸಲಾಗುತ್ತದೆ. ಈ ಕಾರಣಕ್ಕೆ ಗಂಡನಿಂದ ಎಷ್ಟೇ ಹಿಂಸೆಗೆ ಕ್ರೌರ್ಯಕ್ಕೆ ಒಳಗಾದರೂ ಗಂಡನ ಮನೆಯೇ ಸರ್ವಸ್ವವೆಂದೂ ಸಹಿಸುವುದು, ಅಲ್ಲಿಯೇ ಬದುಕನ್ನು ಸವೆಸುವುದು ಹೆಂಗಸಿಗೆ ಅನಿವಾರ್ಯ. ಕೊಟ್ಟ ಹೆಣ್ಣು ಕುಲಕ್ಕೆ ಹೊರಗಾದ್ದರಿಂದ ತವರಿನ ಬೆಂಬಲವಿಲ್ಲದೆ ಆರ್ಥಿಕ ಭದ್ರತೆಯೂ ಇಲ್ಲದ ಅವಳ ಬಾಳು ಇಟ್ಟಾಂಗ ಇರಬೇಕ ಎನ್ನುವ ಸ್ಥಿತಿಯಲ್ಲಿದೆ.

ವೈವಾಹಿಕ ಜೀವನದಲ್ಲಿ ಗಂಡನ ಆಸೆ ಆಕಾಂಕ್ಷೆಗಳಿಗನುಗುಣವಾಗಿ ತನ್ನದನ್ನು ಬೆಳೆಸಿಕೊಳ್ಳಬೇಕು. ಆತನ ಅಡಿಯಾಳಾಗಿರಬೇಕು. ತನ್ನ ವ್ಯಕ್ತಿತ್ವ ಅನಿಸಿಕೆಗಳನ್ನು ಹತ್ತಿಕ್ಕಿ ಬದುಕಬೇಕು. ಇದನ್ನು ಒಪ್ಪದಿದ್ದಲ್ಲಿ ಪ್ರಶ್ನಿಸಿದಲ್ಲಿ ಅವಳು ಗಂಡನೊಂದಿಗೆ ಬದುಕಲು ನಾಲಾಯಕ್ಕು ಎಂದು ತಿಳಿಯಲಾಗುತ್ತದೆ.

'ಧರ್ಮೇಚ ಅರ್ಥೇಚ ಕಾಮೇಚ ನಾತಿಚರೇಮಿ' ಎಂದು ಮದುವೆಯ ಕ್ರಿಯೆಯನ್ನು ಒಪ್ಪಿಕೊಳ್ಳುವ ಮೇಲು ಜಾತಿಯಲ್ಲಿ ಗಂಡನ ಆಳ್ವಿಕೆ ಹೆಂಗಸಿಗೆ ಉಸಿರುಗಟ್ಟಿಸುವಂತದ್ದು. ಅವಳ ಅನಿಸಿಕೆ ಆಶಯ, ಆಕಾಂಕ್ಷೆಗಳು ಗೌಣವಾಗಿ ಆತನ ಬೇಕು ಬೇಡಗಳಿಗೆ ಪ್ರಾಧಾನ್ಯ ದೊರಕಿದೆ. ಅವಳ ಅಭಿವ್ಯಕ್ತಿಗೆ ಅವಕಾಶವೇ ಇಲ್ಲವಾದುದರಿಂದ ಗಂಡನ ಕೈಗೊಂಬೆಯಾಗಿ ಚೆನ್ನಾಗಿ ಬಾಳಲು ಕೇವಲ ಮುಸ್ಲಿಂ ಮಹಿಳೆಯಲ್ಲದೆ ಪ್ರತಿ ಮಹಿಳೆಯ ಸಮಸ್ಯೆಯು ಒಂದೇ ತೆರನಾಗಿದೆ.

ಮನುಷ್ಯನು ರಚಿಸಿಕೊಂಡ ಸಂಘ ಸಂಸ್ಥೆಗಳಲ್ಲಿ ಕುಟುಂಬ ಮತ್ತು ವಿವಾಹ ಮುಖ್ಯವಾದವು. ಇವು ಮನುಷ್ಯನ ಮೂಲಭೂತ ಬೇಡಿಕೆಗಳನ್ನು ಈಡೇರಿಸುವುದರೊಂದಿಗೆ ಸಂಸ್ಕೃತಿಯನ್ನು ರೂಪಿಸಿಕೊಂಡು ಬಂದಿವೆ. ಹೆಣ್ಣು, ಗಂಡು, ಪೂರ್ಣ ಜೀವನದಲ್ಲಿ ದಂಪತಿಗಳಾಗಿ ಜೊತೆಯಲ್ಲಿ ಬಾಳಲು ಸಮಾಜದ ಮನ್ನಣೆಯ ಅಗತ್ಯವಿದೆ. ಇದು ವಿವಾಹದ ಮೂಲಕ ಏರ್ಪಡುತ್ತದೆ.

ಮುಸ್ಲಿಂರಲ್ಲಿಯೂ ಆದರ್ಶ ಬದುಕನ್ನು ನಡೆಸಲು ಗಂಡು ಮತ್ತು ಹೆಣ್ಣಿಗೆ ಸಮುದಾಯದವರ ಮುಂದೆ 'ನಿಖಾ' ಮಾಡುವುದರ ಮೂಲಕ ದಂಪತಿಗಳನ್ನಾಗಿ ಮಾಡಲಾಗುತ್ತದೆ. ಇದರಿಂದ ಈ ಜೋಡಿಗಳು ಜೀವನ ಪರ್ಯಂತ ಉತ್ತಮ ಸಂಗಾತಿಗಳಾಗಿರುವುದಲ್ಲದೆ. ಇವರಿಗೂ ಇವರ ಮಕ್ಕಳಿಗೂ ಸಮಾಜದ ಮನ್ನಣೆ, ಗೌರವಾದರಗಳು ಲಭ್ಯವಾಗುತ್ತವೆ.

ಒಂದು ವೇಳೆ ವಿವಾಹದ ಅನಂತರ ಯಾವುದೇ ಕಾರಣದಿಂದ ದಂಪತಿಗಳಿಬ್ಬರೂ ಹೊಂದಿಕೊಂಡು ಬಾಳಲು ಅಸಾಧ್ಯವಿದ್ದಾಗ, ವೈವಾಹಿಕ ಬಂಧನವನ್ನು ಸಾಂಪ್ರದಾಯಿಕವಾಗಿ ಮುರಿಯಬಹುದು. ಇಸ್ಲಾಂ ಧರ್ಮ ವಿಚ್ಛೇದನಕ್ಕೆ ಅವಕಾಶ ಮಾಡಿಕೊಟ್ಟಿದೆ, (ಎರಡನೇಯ ಅಧ್ಯಯನದ ೨೨೮ನೇ ಶ್ಲೋಕದಲ್ಲಿ ಕುರಾನ್ ವಿಚ್ಛೇದನವನ್ನು ಕುರಿತು ಚರ್ಚಿಸುತ್ತದೆ) ತನ್ನ ಪತ್ನಿಗೆ ವಿಚ್ಛೇದನ ಕೊಡುವ ಹಕ್ಕನ್ನು ದ್ವೇಷಕ್ಕೆ ಅರ್ಹವಾದದು, ಆದರೆ ಈ ಅವಕಾಶವನ್ನು ಅಪರೂಪವಾಗಿ ಹಾಗೂ ವಿಶೇಷ ಸಂದರ್ಭಗಳಲ್ಲಿ ಮಾತ್ರ ಈ ಹಕ್ಕನ್ನು ಉಪಯೋಗಿಸಬೇಕು.

ಇಸ್ಲಾಂನ ಷರಿಯತ್ ಪ್ರಕಾರ ಮೂರು ವಿವಾಹಗಳಲ್ಲಿ ವಿವಾಹ ವಿಚ್ಛೇದನ ಹೊಂದಬಹುದು.

* ತಲ್ಲಾಖ್
* ಖ್ವುಲಾ
* ತಫರೀಖ್

೪.೪.೧. ತಲ್ಲಾಖ್

'ತಲ್ಲಾಖ್' ಎಂಬುದರ ಅರ್ಥ ದಂಪತಿಗಳ ವಿಚ್ಛೇದನ, ಅಂದರೆ ಪುರುಷರು ತನ್ನ ಪತ್ನಿಯಿಂದ ದಾಂಪತ್ಯ ಸಂಬಂಧವನ್ನು ಮುರಿಯುವುದು, ವಿಚ್ಛೇದನ ಹೇಗೆ ಪಡೆಯಬೇಕು ಎಂಬುದರ ಪ್ರಸ್ತಾಪ ಖುರಾನಿನಲ್ಲಿ ಹೇಳಲಾಗಿದೆ. ಪೈಗಂಬರವರಿಗೆ ಅಪ್ರಿಯವಾದ ಶಬ್ದವೆಂದರೆ ''ತಲ್ಲಾಖ್'' ಎಂದು ಖುರಾನಿನಲ್ಲಿ ತಿಳಿಸಲಾಗಿದೆ.

ಒಟ್ಟಿನಲ್ಲಿ ಖುರಾನಿನ ಪ್ರಕಾರ ಈ ವಿಚ್ಛೇದನ ಯಾವಾಗ ಜಾರಿಗೆ ಬರುತ್ತದೆಂದರೆ, ಪತ್ನಿ ತನ್ನ ಗಂಡನೊಂದಿಗೆ ಅವಿಧೇಯಳಾಗಿ ವರ್ತಿಸಿದರೆ, ಪರ ಪುರುಷನ ಸಂಬಂಧವನ್ನು ಹೊಂದಿದ್ದು ಅನೈತಿಕ ವ್ಯವಹಾರದಲ್ಲಿ ತೊಡಗಿದ್ದರೆ, ಅಂತಹ ಸಂದರ್ಭಗಳಲ್ಲಿ ಗಂಡನು ತನ್ನ ಹಂಡತಿಗೆ ತಪ್ಪನ್ನು ತಿದ್ದಿಕೊಳ್ಳುವಂತೆ ತಿಳಿಯಪಡಿಸಬೇಕು, ಇದಕ್ಕೆ ಒಪ್ಪದೆ ತನ್ನ ಚಾಳಿಯನ್ನೇ ಮುಂದುವರೆಸಿದರೆ ಗಂಡ ಹೆಂಡತಿಯರಿಬ್ಬರೂ ಪೂರ್ಣ ಪ್ರಜ್ಞೆಯಲ್ಲಿರುವಾಗ, ಗಂಡನು ತನ್ನ ಹೆಂಡತಿಗೆ ಕೇಳಿಸುವಂತೆ ''ತಲ್ಲಾಖ್'' ಹೇಳಿ ಸ್ವತಂತ್ರನಾಗಬಹುದು. ತಲ್ಲಾಖ್‌ನಲ್ಲಿ ಎರಡು ವಿಧಗಳಿವೆ.

೧. ಏಕ ಸಮಯದಲ್ಲಿ ಮೂರು ಬಾರಿ ತಲ್ಲಾಖ್ ಹೇಳುವುದು.

೨. ತಿಂಗಳಿಗೆ ಒಂದೊಂದರಂತೆ ಮೂರು ತಿಂಗಳು ಹಂತ ಹಂತವಾಗಿ ''ತಲ್ಲಾಖ್'' ಹೇಳುವುದು.

ಹೀಗೆ ''ತಲ್ಲಾಖ್'' ಹೇಳುವಾಗ ಇಬ್ಬರು ವ್ಯಕ್ತಿಗಳು ಸಾಕ್ಷಿಯಾಗಿ ಕೇಳಿರಬೇಕು. ಒಟ್ಟಿನಲ್ಲಿ ಏಕ ಸಮಯದಲ್ಲಿ ಮೂರು ಬಾರಿ ತಲ್ಲಾಖ್ ಹೇಳುವುದರಿಂದ ದಾಂಪತ್ಯ ಸಂಬಂಧ ಮುರಿದು ಬೀಳುತ್ತದೆ. ಮೂರು ಹಂತಗಳಲ್ಲಿ ವಿಚ್ಛೇದನ ನೀಡುವುದರಿಂದ ಈ ೩ ತಿಂಗಳ ಅವಧಿಯಲ್ಲಿ ಪುನಃ ಹೊಂದಿಕೊಂಡು, ಸಂಗಾತಿಗಳಾಗಿ ಬದುಕುವ ಅವಕಾಶವಿದೆ. ಆದರೆ ಮೂರು ತಿಂಗಳ ಅವಧಿಯಲ್ಲಿಯೂ ಇಬ್ಬರೂ ಹೊಂದಿಕೊಳ್ಳದೆ ಅಂತಿಮ ''ತಲ್ಲಾಖ್'' ನೀಡಿದರೆ ಇವರ ದಾಂಪತ್ಯ ಸಂಬಂಧ ಮೇಲಿನಂತೆಯೇ ಮುರಿದು ಬೀಳುತ್ತದೆ.[೬]

ಗಂಡನು ಬರವಣಿಗೆಯ ಮೂಲಕ (ಪತ್ರದ ಮೂಲಕ) ಇಬ್ಬರು ವ್ಯಕ್ತಿಗಳನ್ನು ಸಾಕ್ಷಿ ಇಟ್ಟು, ತನ್ನ ಹೆಂಡತಿಗೆ ''ತಲ್ಲಾಖ್'' ಪತ್ರ ಕಳುಹಿಸಿಕೊಟ್ಟು ಆ ಪತ್ರವನ್ನು ಹೆಂಡತಿ ಸ್ವೀಕರಿಸಿ ಒಪ್ಪಿಕೊಂಡರೆ ಅದು ಸಹ ವಿಚ್ಛೇದನವೆಂದು ಪರಿಗಣಿಸಲಾಗುವುದು. ಈ ಪತ್ರವನ್ನು ''ತಲ್ಲಾಖ್ ನಾಮ'' ಎಂದು ಕರೆಯಲಾಗುವುದು.

ಆದರೆ ಹೆಂಡತಿ ತನ್ನ ಗಂಡ ಕಳುಹಿಸಿರುವ ವಿಚ್ಛೇದನ ಪತ್ರ ಸುಳ್ಳೆಂದು ಹೇಳಿ, ಒಪ್ಪಿಕೊಳ್ಳದಿದ್ದರೆ ಆಗ ವಿಚ್ಛೇದನವಾಗುವುದಿಲ್ಲ. ಇಂತಹ ಸಂದರ್ಭದಲ್ಲಿ ಸ್ವತಃ ಗಂಡನೇ ಬಂದು ತಾನು ವಿಚ್ಛೇದನ ಪತ್ರ ಕಳುಹಿಸಿರುವುದು ನಿಜವೆಂದು ತಿಳಿಸಿದರೆ, ಆಗ ವಿಚ್ಛೇದನವೆಂದು ಪರಿಗಣಿಸಲಾಗುವುದು.

ಹೀಗೆ ಮೇಲಿನಂತೆ ವಿಚ್ಛೇದನ ನೀಡಿದ ನಂತರ ಗಂಡನು ವಿವಾಹದ ಸಂದರ್ಭದಲ್ಲಿ ಕಟ್ಟಿದ ''ಮಹರ್'' ಭತ್ಯೆ ಹಾಗೂ ಹೆಂಡತಿ ತವರು ಮನೆಯಿಂದ ತಂದ ವಸ್ತ್ರ ಒಡವೆ ಹಾಗೂ ಚರಚರ ಆಸ್ತಿಯನ್ನು ಸಹ ಹಿಂದಿರುಗಿಸಬೇಕು.

ಹೀಗೆ ಹೆಂಡತಿಗೆ ''ತಲ್ಲಾಖ್'' ನೀಡುವುದರ ಮುಖಾಂತರ ಇವರಿಬ್ಬರ ದಾಂಪತ್ಯ ಬದುಕು ಸಂಪೂರ್ಣವಾಗಿ ಮುರಿದು ಬೀಳುವುದು. ಒಂದು ವೇಳೆ ಗಂಡನಿಗೆ ತನ್ನ ತಪ್ಪಿನ ಅರಿವಾಗಿ, ಪುನಃ ಸಂಗಾತಿಗಳಾಗಿ ತಮ್ಮ ದಾಂಪತ್ಯವನ್ನು ಮುಂದುವರೆಸೋಣವೆಂಬ ಮನಸ್ಸು ಬಂದರೂ ಸಹ ಈ ಸಂಬಂಧ ಕೂಡುವ ಹಾಗಿಲ್ಲ. ಅಂದರೆ ತಮ್ಮ ಸಂಬಂಧವನ್ನು ಮೊದಲಿನಂತೆಯೇ ಮುಂದುವರಿಸೋಣವೆಂದು ನಿರ್ಧರಿಸಿಕೊಂಡರೆ ಮುಸ್ಲಿಂ ''ಷರಿಯತ್''ನಲ್ಲಿ ಅನೇಕ ಅಡೆತಡೆಗಳನ್ನು ಸೂಚಿಸಲಾಗಿದೆ.[೭]

ಅಂದರೆ ''ತಲ್ಲಾಖ್'' ಪಡೆದ ಸ್ತ್ರೀ ನಾಲ್ಕು ತಿಂಗಳು ಹತ್ತು ದಿವಸ ''ಇದ್ದತ್'' ಇರಬೇಕು. (ಇದ್ದತ್ ಎಂದರೆ ನಿರೀಕ್ಷೆ) ಈ ಅವಧಿಯಲ್ಲಿ ಈಕೆ ಗರ್ಭಿಣಿ ಎಂದು ಗೊತ್ತಾದರೆ, ಮಗು ಹುಟ್ಟುವವರೆಗೂ ನಿರೀಕ್ಷೆ ಮಾಡಬೇಕು. ಮಗು ಹುಟ್ಟಿದ ಕೆಲವು ದಿನದ ನಂತರ ಮತ್ತೊಬ್ಬ ಒಪ್ಪಿ ಬಂದರೆ ಅವನೊಂದಿಗೆ 'ನಿಖಾ' ಮಾಡಿಕೊಂಡು, ಒಂದು ದಿನದ ಮಟ್ಟಿಗೆ ಪತಿ ಪತ್ನಿಯಾಗಿರಬೇಕು ಈಗ ಈ ಗಂಡನು ಈಕೆಗೆ 'ತಲ್ಲಾಖ್' ಕೊಡಬೇಕು. ಪುನಃ ಈತನಿಂದಲೂ ''ತಲ್ಲಾಖ್'' ಪಡೆದು ''ಇದ್ದತ್'' ದಿನ ಕಳೆಯಬೇಕು. ಈ ಅವಧಿಯಲ್ಲೇನಾದರೂ ಈಕೆ ಗರ್ಭಿಣಿ ಎಂದು ಕಂಡುಬಂದರೆ ಮಗು ಹುಟ್ಟುವವರೆಗೂ ನಿರೀಕ್ಷಿಸಬೇಕು. ಹೀಗೆ

ಎಲ್ಲ ಅಡೆತಡೆಗಳಿಂದ ಮುಕ್ತಳಾಗಿ, ಮೊದಲು ''ತಲ್ಲಾಖ್'' ಪಡೆದ ಗಂಡನೊಂದಿಗೆ ಮತ್ತೆ 'ನಿಖಾ' ಮಾಡಿಕೊಳ್ಳುವುದರ ಮುಖೇನ ಪುನಃ ಪತಿ ಪತ್ನಿಯರಾಗಿ ತಮ್ಮ ವೈವಾಹಿಕ ಸಂಬಂಧವನ್ನು ಮುಂದುವರಿಸಬಹುದು.

ಈ ವಿಧವಾಗಿ ಪುನಃ ದಂಪತಿಗಳಾಗಿ ಬದುಕಬೇಕಾದರೆ ಅನೇಕ ಅಡ್ಡಿ ಆತಂಕಗಳಿವೆ. ಆದುದರಿಂದ ಪತಿ ತನ್ನ ಪತ್ನಿಗೆ ವಿಚ್ಛೇದನ ನೀಡುವಾಗ ಬಹಳ ಎಚ್ಚರಿಕೆಯಿಂದ ಮುಂದೆ ಬರಬಹುದಾದ ತೊಂದರೆಗಳೆಲ್ಲವನ್ನು ಆರೋಪಿಸಿ, ''ತಲ್ಲಾಖ್'' ಕೊಡಬೇಕು. ದುಡುಕಿನಿಂದ ಅಥವಾ ಮತ್ತೊಬ್ಬರ ಪ್ರಲೋಬನೆಗೆ ಒಳಗಾಗಿ ''ತಲ್ಲಾಖ್'' ಕೊಡುವುದರಿಂದ ತಾನು ಪಶ್ಚಾತಾಪ ಪಟ್ಟುಕೊಂಡರೂ ಸಂಬಂಧ ಕೂಡುವ ಹಾಗಿಲ್ಲ. ಕೂಡಬೇಕೆಂದರೆ ಮೇಲಿನ ನಿಯಮಗಳನ್ನು ಅನುಸರಿಸಬೇಕು.

ಈ ಕ್ರಮದಲ್ಲಿ ಗಂಡನೇ ಹೆಂಡತಿಯನ್ನು ಬಿಟ್ಟುಕೊಡುತ್ತಾನೆ. ವಿವಾಹ ಸಂಬಂಧವನ್ನು ಅಲ್ಲಗಳೆಯುತ್ತಾನೆ. ಸ್ತ್ರೀಯರು ಅಬಲೆಯರು, ಅಸ್ವತಂತ್ರರು, ಪುರುಷರೇ ಪ್ರಬಲರು ಎಂಬ ತತ್ವ ಇಲ್ಲಿಯೂ ಎದ್ದು ಕಾಣುತ್ತದೆ. ಒಬ್ಬ ಇಸ್ಲಾಮಿ ಪುರುಷನು ಯಾವ ಕಾರಣವನ್ನು ಸೂಚಿಸದೆ ತನ್ನ ಹೆಂಡತಿಗೆ 'ತಲಾಖ್' ಕೊಡಬಹುದು. ಈ ನಿರಂಕುಶಾಧಿಕಾರ ನಿಜವಾಗಿಯೂ ಭೀಕರವಾಗಿದೆ. ಆದರೂ ಈ ಅಧಿಕಾರ ಅಳಿದು ಹೋಗಿಲ್ಲ. 'ತಲಾಖ್ ಕೊಟ್ಟಿದ್ದೇನೆ' ಎಂದು ಗಂಡನು ಎಚ್ಚರಿಸಿದ ಕ್ಷಣದಿಂದಲೇ ಅದು ಜಾರಿಗೆ ಬರುವುದು ಹಾಗೆ ಹೇಳುವಾಗ ಹೆಂಡತಿ ಅಲ್ಲಿ ಇಲ್ಲದಿದ್ದರೂ ಸರಿಯೇ ಅವಳಿಗೆ ಈ ಬಗ್ಗೆ ಸೂಚನೆಯನ್ನು ಕೊಡಬೇಕಾಗಿಲ್ಲ.

ಹೆಂಡತಿಯ ಪಾಲನೆ ಪೋಷಣೆ ಮಾಡದಿರುವುದು, ದಾಂಪತ್ಯ ಜೀವನದ ಕರ್ತವ್ಯಗಳನ್ನು ನೆರವೇರಿಸದಿರುವುದು, ನಪುಂಸಕತ್ವಾದಿ ದೋಷಗಳಿರುವುದು. ಚಿತ್ತ ವಿಕೃತಿ ಅಥವಾ ಕುಷ್ಠಾದಿ ರೋಗಗಳು ಅಥವಾ ಲೈಂಗಿಕ ಭೀಕರ ರೋಗಗಳು ಇರುವುದು. ಹೆಂಡತಿಯನ್ನು ದೈಹಿಕವಾಗಿ, ಮಾನಸಿಕವಾಗಿ ಹಿಂಸಿಸುವುದು, ಹೀನ ಸ್ತ್ರೀಯರೊಡನೆ ಸಂಪರ್ಕ ಇಟ್ಟುಕೊಳ್ಳುವುದು. ಹೆಂಡತಿಯನ್ನು ಅನೈತಿಕ ಜೀವನಕ್ಕೆ ಒತ್ತಾಯಿಸುವುದು, ಹೆಂಡತಿಯ ಆಸ್ತಿಯನ್ನು ವಿಲೇ ಮಾಡುವುದು ಅಥವಾ ಅವಳ ಆಸ್ತಿಯ ಅಧಿಕಾರದ ಚಲಾವಣೆಗೆ ಭಾಧೆಯನ್ನುಂಟು ಮಾಡುವುದು, ಅವಳ ಧಾರ್ಮಿಕ ಆಚರಣೆಗಳಿಗೆ ತಡೆಯನ್ನೊಡ್ಡುವುದು, ಗಂಡನಿಗಿಂತ ಒಬ್ಬಳಿಗಿಂತ ಹೆಚ್ಚು ಹೆಂಡತಿಯ ರದ್ದು, ಕುರಾನಿನ ಆದೇಶಗಳಿಗನುಸಾರವಾಗಿ ಅವಳನ್ನು ಸರಿಯಾಗಿ ನೋಡಿಕೊಳ್ಳದಿರುವುದು. ಇವೇ ಮೊದಲಾದ ಕಾರಣಗಳ ಮೇಲೆ ಮುಸ್ಲಿಂ ಸ್ತ್ರೀಯರು ನ್ಯಾಯಾಲಯಕ್ಕೆ ಮನದಟ್ಟು ಮಾಡಿಕೊಟ್ಟು ದಾಂಪತ್ಯ ವಿಚ್ಛೇದನವನ್ನು ಕೇಳಬಹುದಾಗಿದೆ. ಇದಲ್ಲದೆ ಮುಸ್ಲಿಂ ಷರಿಯತ್ ನಿಯಮಗಳಿಗೆ ಒಳಪಡುವ ಬೇರಾವುದೇ ಕಾರಣದ ಮೇಲೆ, ಅದು ಸಾಮಾನ್ಯನಿಗೆ ವಿರುದ್ಧವಾಗಿದ್ದ ಹೊರತು, ಮುಸ್ಲಿಂ ಸ್ತ್ರೀಯರು ವಿಚ್ಛೇದನವನ್ನು ಪಡೆದುಕೊಳ್ಳಬಹುದಾಗಿದೆ. ಮತಾಂತರದ ಕಾರಣದ ಮೇಲೆಯೂ ವಿಚ್ಛೇದನವನ್ನು ಕೇಳಬಹುದಾಗಿದೆ.

### ೪.೪.೨. ಖುಲಾ

'ಖುಲಾ' ಎಂಬ ಶಬ್ದಕ್ಕೂ ''ವಿಚ್ಛೇದನ'' ಎಂಬ ಅರ್ಥವಿದೆ. ಅಂದರೆ ಗಂಡನು ತನ್ನ ಹೆಂಡತಿಗೆ ''ತಲ್ಲಾಖ್'' ಸಹ ಕೊಡದೆ ''ಖುಲಾ''ಕ್ಕೂ ಒಪ್ಪಿಕೊಳ್ಳದೆ ಇದ್ದು, ದಂಪತಿಗಳಿಬ್ಬರೂ ಹೊಂದಿ ಬಾಳಲು ಸಾಧ್ಯವಾಗದೆ ಹೋದರೆ ಅಥವಾ ಗಂಡನು ಹುಚ್ಚನಾದರೆ ಘೋರ ಕಾಯಿಲೆಯಿಂದ ನರಳುತ್ತಿದ್ದರೆ, ತನ್ನ ಕುಟುಂಬದ ಖರ್ಚನ್ನು

ನಿಭಾಯಸದೆ, ನಾಲ್ಕು ವರ್ಷಕ್ಕಿಂತ ಹೆಚ್ಚು ದೂರವಿದ್ದು, ಯಾವ ಖರ್ಚೂ ನಿಭಾಯಿಸದೆ ತಪ್ಪು ದಾರಿ ಹಿಡಿದಿದ್ದರೆ, ಆಗ ಹೆಂಡತಿ ಖಾಜಿಯವರ ಸಮ್ಮುಖದಲ್ಲಿ ಇದೆಲ್ಲವನ್ನು ಆಧಾರ ಸಹಿತ ಸಾಬೀತುಪಡಿಸಿ, ಇವರ ಮುಖಾಂತರ ತನ್ನ ವೈವಾಹಿಕ ಸಂಬಂಧ ಮುಕ್ತಾಯಗೊಳಿಸುವಳು.

ಒಂದು ವೇಳೆ ಈಕೆಯ ಗಂಡನು ನಿಜಕ್ಕೂ ಕಾಣೆಯಾಗಿದ್ದರೆ, ಆತ ಕಾಣೆಯಾಗಲು ಕಾರಣವೇನು, ಜೀವಂತವಾಗಿದ್ದಾನೋ, ಇಲ್ಲವೋ, ಎಂದೆಲ್ಲಾ ವಿಚಾರಿಸಿ ಜೀವಂತನಾಗಿದ್ದಾನೆ ಎಂದು ತಿಳಿದು ಬಂದರೆ, ಆತನನ್ನು ಹುಡುಕಿಸಲಾಗುವುದು. ಹೀಗೆಲ್ಲ ಪರಿಶಾಲಿಸಿದ ಮೇಲೆ, ನಾಲ್ಕು ವರ್ಷಕ್ಕಿಂತಮೀರಿ ಐದು ವರ್ಷಗಳಾದರೂ, ಆತ ಸಿಗದಿದ್ದ ಪಕ್ಷದಲ್ಲಿ ''ಖಾಜಿ'' ಯವರು ಆಕೆಯ ವೈವಾಹಿಕ ಸಂಬಂಧವನ್ನು ಮುರಿಯುವರು.

ಮೇಲೆ ಹೇಳಿದ ಮೂರು ವಿಧದಲ್ಲಿ ಪತಿ ಪತ್ನಿಯರನ್ನು ಬೇರೆಮಾಡುವ ನಿಯಮವನ್ನು ಮುಸ್ಲಿಂರೆಲ್ಲಾರು ಪಾಲಿಸುತ್ತಾರೆ.

ಕೆಲವರು ತಮಗಿಷ್ಟ ಬಂದಾಗ ''ತಲ್ಲಾಖ್'' ಕೊಡುವುದು, ಮತ್ತೊಂದು ವಿವಾಹವಾಗುವುದು. ''ತಲ್ಲಾಖ್'' ಕೊಟ್ಟಿದ್ದು ಏಕೆ ಎಂಬ ಪ್ರಶ್ನೆಗೆ ಸರಿಯಾಗಿ ಉತ್ತರ ಕೊಡದೇ ಇರುವುದು. ಹೆಣ್ಣಿಗೆ ಜೀವನಾಂಶ (ಮಹರ್ ಭತ್ಯೆ) ಕೊಡದೆ ಇರುವುದು ಮಕ್ಕಳಿಗೂ ಸಹ ಜೀವನಾಂಶಕೊಡದೆ ಇರುವುದು ಇದೆಲ್ಲ ಇವತ್ತಿನ ಸಮಾಜದಲ್ಲಿ ಪ್ರತಿನಿತ್ಯಕಾಣುವಂತಹ ಸಮಸ್ಯೆಯಾಗಿದೆ. ''ತಲ್ಲಾಖ್'' ಕೊಡಲು ತನಗೆ ಧರ್ಮದ ಬೆಂಬಲವಿದೆ ಎಂದು ಅಮಾಯಕ ಹೆಣ್ಣುಮಕ್ಕಳನ್ನು ತಮ್ಮ ಸ್ವಾರ್ಥಕ್ಕಾಗಿ ಉಪಯೋಗಿಸಿಕೊಂಡು ಅನಂತರ ''ತಲ್ಲಾಖ್'' ನೀಡುವ ಎಷ್ಟೋ ವ್ಯಕ್ತಿಗಳನ್ನು ಸಹ ನಮ್ಮ ಸುತ್ತಮುತ್ತ ಕಾಣಬಹುದಾಗಿದೆ. ಯಾವ ಮೂಲ ಸಿದ್ಧಾಂತವೇ ಆಗಲಿ ಜನಹಿತಕ್ಕಾಗಿಯೇ ಇರುತ್ತದೆ. ಆದರೆ ಕೆಲವರು ಅದನ್ನು ತಮ್ಮ ಅನೂಕೂಲಕ್ಕಾಗಿ ಬಳಸಿಕೊಂಡಿದ್ದಾರೆ. ಇಂತಹ ಘಾತುಕರು ಧರ್ಮದ ಹೆಸರಲ್ಲಿ ತಮ್ಮ ವಿಜಯದ ಪತಾಕೆ ಹಾರಿಸುತ್ತಿದ್ದಾರೆ. ಇದರಲ್ಲಿ ಬೆಂದು ಬಲಿಯಾಗುವವರು ಅಮಾಯಕರು, ಮುಗ್ಧರು, ಅಬಲೆಯರು ಇವರ ಸಮಸ್ಯೆಗಳು ಯಾವತ್ತೂ ಸಮಸ್ಯೆಯಾಗಿಯೇ ಉಳಿಯುತ್ತವೆ. ಇಂತಹ ಸಂದರ್ಭದಲ್ಲಿ ಎಷ್ಟೋ ಮಹಿಳೆಯರು, ಸಮಾಜದೊಂದಿಗೆ ಹೊಂದಿ ಬಾಳಲು ಸಾಧ್ಯವಿಲ್ಲದೆ, ಮನೋರೋಗಿಗಳಾಗಿ, ಕೀಳರಿಮೆಯಿಂದ ಬದುಕಬೇಕಾಗುತ್ತದೆ.

ಗಂಡನ ಉಪದ್ರವದಿಂದ ಸ್ವತಂತ್ರಳಾಗಿ, ಜೀವನ ನಡೆಸಬಹುದು ಎಂಬ ಇಚ್ಛೆವುಳ್ಳ ಸ್ತ್ರೀ ಪುನಃ ಸರಿಯಾದ ಬಾಳಸಂಗಾತಿ ಸಿಕ್ಕದಿದ್ದಾಗ ತನ್ನತನವನ್ನೇ ನಾಶಮಾಡಿಕೊಳ್ಳಲು ಜಟಿಲ ಸಮಸ್ಯೆಯಲ್ಲಿ ಸಿಲುಕಬೇಕಾಗುತ್ತದೆ.

ಹೀಗೆ ಸ್ವಾರ್ಥ, ಸಂಪ್ರದಾಯ, ಅಜ್ಞಾನ, ಮೌಢ್ಯತೆ, ಬಡತನ ಇತ್ಯಾದಿಗಳಲ್ಲಿ ಸಿಲುಕಿದ ಮುಸ್ಲಿಂ ಸ್ತ್ರೀಯರು ಅತಂತ್ರಳಾಗಿ ತಲ್ಲಾಖ್ ಎಂಬ ವಿಚ್ಛೇದನಕ್ಕೆ ಒಳಗಾಗಿ ತಮ್ಮ ಬುದುಕಿನ ಅರ್ಥವನ್ನು ಕಳೆದುಕೊಳ್ಳುತ್ತಿದ್ದಾರೆ.

ಮುಸ್ಲಿಂ ಸಮುದಾಯದಲ್ಲಿ ಪುರುಷರು ಸ್ತ್ರೀಯನ್ನು ಮನುಷ್ಯಳೆಂದು ಪರಿಗಣಿಸಲು ನಿರಾಕರಿಸುವ ಪುರುಷ ಪ್ರಾಧಾನ್ಯ ವ್ಯವಸ್ಥೆಯು ಜಟಿಲವಾಗಿದೆ. ಮುಸ್ಲಿಂ ಸಮಾಜದ ಮಹಿಳೆ ಹಲವಾರು ನಿಯಂತ್ರಣಗಳಡಿಯಲ್ಲಿ ಬದುಕುತ್ತಿದ್ದಾಳೆ. ಪುರುಷ ಪ್ರಧಾನ ಆಶಯಗಳಿಗೆ ಚಾಲನೆ ದೊರೆತರು ಸ್ತ್ರೀಪರ ಆಶಯಗಳು ಮೂಲೆ ಗುಂಪಾಗುತ್ತವೆ.

ಧರ್ಮ, ಸಂಪ್ರದಾಯಗಳ ಹೆಸರಿನಲ್ಲಿ ದೇಶದ ಅರ್ಧಭಾಗದಷ್ಟಿರುವ ಮಹಿಳೆಯರನ್ನು ಮೂಲೆಗುಂಪು ಮಾಡಿದ ಧರ್ಮಗಳ ನೀತಿಗಳು ನ್ಯಾಯಯುತವಾಗಿಲ್ಲ ಎಂಬುದು ನನ್ನ ಅನಿಸಿಕೆ.

ಮಹಿಳೆಯ ಮೇಲಿನ ಕಟ್ಟುಪಾಡುಗಳು ಸಡಿಲವಾದಾಗ ಮಾತ್ರ ಅನೇಕ ಮುಸ್ಲಿಂ ಮಹಿಳೆಯರ ಬದುಕು ಸಹಜ ಸ್ಥಿತಿಯಲ್ಲಿ ಮುಂದುವರೆಯಲು, ಸಾಧ್ಯವಾಗುತ್ತದೆ. ಬದುಕನ್ನು ರೂಪಿಸಿಕೊಳ್ಳಬಲ್ಲೆನೆಂಬ ಛಲ, ಧೈರ್ಯ ಎರಡೂ ಇರುವುದರಿಂದ ಸಂಪ್ರದಾಯಗಳನ್ನು ಧಾರ್ಮಿಕ ಕಂದಾಚಾರಗಳ ವಿರುದ್ಧ ನಿಲ್ಲಲು ಸಿದ್ಧಳಾಗುತ್ತಾಳೆ.

ಅಜ್ಞಾನ, ಮೌಢ್ಯಗಳನ್ನು ಹೋಗಲಾಡಿಸಲು 'ಸಾಕ್ಷರತೆ' ಬಹಳ ಪರಿಣಾಮಕಾರಿಯಾದ ಅಸ್ತ್ರ ಎನ್ನುವುದು ನನ್ನ ನಂಬಿಕೆ.

ಎಸ್. ಆರ್. ನಗರದ ಉಮರ್‌ಖಾನ್‌ರವರ ಪ್ರಕಾರ, ಸುಮ್ಮನೆ ತಲ್ಲಾಖ್ ಅನ್ನು ತಮಾಷೆಗೂ ಸಹ ಹೇಳುವ ಹಾಗಿಲ್ಲವಂತೆ, ಅದಕ್ಕೂ ಸಹ ಕೆಲವು ಷರತ್ತುಗಳಿವೆ, ಹೆಣ್ಣಿನ ತಪ್ಪು ಇದ್ದರೆ ಅಥವಾ ಆಕೆಗೆ ಇಷ್ಟವಿಲ್ಲದ ಮದುವೆಯಿದ್ದಾಗ ಆಕೆಯ ಮನೆಯವರನ್ನು ಕರೆಯಿಸಿ ಮಾತಾಡುತ್ತಾರೆ. ಒಂದು ವೇಳೆ ಹೆಣ್ಣಿನ ಯಾವ ತಪ್ಪಿಲ್ಲದಿದ್ದರೂ ಕೇವಲ ಗಂಡಿನ ತಪ್ಪಿದ್ದಾಗ, ಹೆಣ್ಣಿಗೆ ಯಾವ ರೀತಿಯ ಸಹಕಾರ ಇಸ್ಲಾಂ ನೀಡಿದೆ ಎಂಬ ಪ್ರಶ್ನೆಗೆ, ಇವರು ಹಣ್ಣು ಚಾಕುವಿನ ಮೇಲೆ ಇದ್ದರೂ, ಚಾಕು ಹಣ್ಣಿನ ಮೇಲೆ ಬಿದ್ದರೂ ಹಣ್ಣಿಗೆ ಹಾನಿಯಾಗುತ್ತದೆ ಎಂದು ಉದಾಹರಿಸಿದರು. ಅಂದರೆ, ಮುಸ್ಲಿಂ ಸಮುದಾಯಗಳಲ್ಲಿ ಹೆಣ್ಣನ್ನು ಸಂಪೂರ್ಣವಾಗಿ ಅಸಹಾಯಕಳು ಎಂದು ನಂಬಿದ್ದಾರೆ.

ಇದೇ ಪ್ರಶ್ನೆಗೆ ಇದೇ ನಗರದ ಮುಸ್ತಫಾ ಎಂಬುವರು ನೀಡಿದ ಪ್ರತಿಕ್ರಿಯೆ ತುಸು ಭಿನ್ನವಾಗಿರಲೇ ಇಲ್ಲ. ಹೆಣ್ಣಿಗೆ ಅನಿವಾರ್ಯವಾಗಿ ವಿವಾಹ ವ್ಯವಸ್ಥೆಯಿಂದ ಹೊರಹೋಗಲೇಬಾರದು, ಗಂಡಿನ ಆಶ್ರಯದಲ್ಲಿ ಅವನಿಗೆ ಅಧೀನಳಾಗಿ, ಅವನ ಮಕ್ಕಳು ಹಾಗೂ ಮನೆಯ ಸದಸ್ಯರನ್ನು ನೋಡಿಕೊಂಡು ಹೋಗಬೇಕು.

ಇವರ ಪ್ರಕಾರ ಗಂಡನ ತಪ್ಪಿದ್ದು, ಹೆಂಡತಿಯ ಯಾವುದೇ ತಪ್ಪಿಲ್ಲದಿದ್ದಾಗ ಆಕೆ ಹೇಗೆ ಅವನನ್ನು ತಿರಸ್ಕರಿಸಬಹುದು, ಹಾಗೂ ಆ ಜೀವನದಿಂದ ಗಂಡಿಗಿರುವ ಹಾಗೆ ಪರ್ಯಾಯ ವ್ಯವಸ್ಥೆಗಳನ್ನು ಇಸ್ಲಾಂ ಕಲ್ಪಿಸಿದೆಯೇ ಎಂದು ಕೇಳಿದಾಗ ಇಲ್ಲ. ಆದರೆ ಹೆಣ್ಣು ಮಕ್ಕಳು ಗಂಡನನ್ನು ಕ್ಷಮಿಸಬೇಕು. ಜೊತೆಗೆ ಸಹಿಸಬೇಕು, ಗಂಡನಾದವನು ಆಕೆಯ ಬಾಳಿಗೆ ಸಾರ್ಥಕತೆಯನ್ನು ಕೊಟ್ಟವನು ಅವನು ದೈವ ಸ್ವರೂಪಿ ಎಂಬ ಉತ್ತರ ಬಂತು.

ಆದರೆ ಯಾರೇ ಆಗಲಿ ತಲ್ಲಾಖ್ ಅನ್ನು ತಮಾಷೆಗೂ ಈ ಪದವನ್ನು ಬಳಸುವ ಹಾಗಿಲ್ಲೆಂದು ತಿಳಿಸಿದರು. ಹಾಗೆಯೇ ಯಾವುದೇ ದಂಪತಿಗಳು ತಲ್ಲಾಖ್‌ಗೆ ಒಳಪಟ್ಟಿದ್ದರೆ ಆ ಊರಿನ ಮುಸ್ಲಿಂ ಧಾರ್ಮಿಕ ಮುಖಂಡರಲ್ಲಿ ಸೇರಿ ಆಗಿರುವ ಬಗ್ಗೆ ವಿಚಾರಿಸಿ, ಸರಿಪಡಿಸುವ ಮಟ್ಟದಲ್ಲಿದ್ದರೆ ಅದನ್ನು ಸರಿಪಡಿಸುತ್ತೇವೆ. ಅದರ ಆಚೆಗೆ ಬಹುಮಟ್ಟಿನ ತಪ್ಪುಗಳೇನಾದರೂ ಕಂಡುಬಂದರೆ, ನಾವೇ ತೀರ್ಮಾನ ಕೊಡುತ್ತೇವೆ ಎಂದರು.

ಆದಷ್ಟು ಯಾರೂ ಸಹ ಯಾವುದೇ ಸಾಂಸಾರಿಕ ಸಂಬಂಧಗಳನ್ನು ಅಷ್ಟು ಸುಲಭವಾಗಿ ಒಡೆಯಲು ಬಿಡುವುದಿಲ್ಲ. ಬದಲಾಗಿ, ಜೋಡಿಸುವ ಪ್ರಯತ್ನ ನಡೆಯುತ್ತೆ ಎಂದರು. ಹಾಗೂ ಗಂಡನಾದವನು ಆ ಮುಖಂಡರ ಮಾತನ್ನು ತಾಳ್ಮೆಯಿಂದ ಕೇಳಬೇಕು. ಮನಬಂದಂತೆ ವರ್ತಿಸುವ ಹಾಗಿಲ್ಲ ಎಂದರು.

**ಜೀವನಾಂಶ**

ಜೀವನಾಂಶವೆಂದರೆ ಕಾನೂನಿನ ಮುಂದಾಳತ್ವದಲ್ಲಿ ಯಾವುದೇ ವ್ಯಕ್ತಿ, ಇನ್ನೊಬ್ಬ ವ್ಯಕ್ತಿಗೆ ಸೂಕ್ತವಾದ ರೀತಿಯಲ್ಲಿ ಯುಕ್ತ ರೀತಿಯಲ್ಲಿ ಜೀವನವನ್ನು ಸಮರ್ಪಕವಾಗಿ ನಿರ್ವಹಿಸಲು ಜೀವನ ಅವಶ್ಯಕತೆಗಾಗಿ ಪರಿಹಾರ ಧನವನ್ನು ಕೊಡುವುದೇ ಜೀವನಾಂಶ.

ಭಾರತದಲ್ಲಿ ವಿವಾಹವಾಗಿರುವ ಪ್ರತಿಯೊಬ್ಬ ಮಹಿಳೆ ಜೀವನಾಂಶ ಪಡೆಯಲು ಹಕ್ಕುಳ್ಳವರಾಗಿರುತ್ತಾರೆ. ಯಾವುದೇ ಧರ್ಮದ ಮಹಿಳೆಯಾಗಿರಲಿ ಈ ಹಕ್ಕನ್ನು ಉಪಯೋಗಿಸಿಕೊಳ್ಳಬಹುದು. ಯಾವುದೇ ಕಾರಣಕ್ಕಾಗಿ ಗಂಡನಿಂದ ಪರಿತ್ಯಜಿಸಲ್ಪಟ್ಟರೆ ಕಾನೂನಿನ ಅನ್ವಯ ಜೀವನಾಂಶವನ್ನು ಪಡೆದುಕೊಳ್ಳಬಹುದು.

ಇಸ್ಲಾಮೀ ನ್ಯಾಯದ ಪ್ರಕಾರ ಒಬ್ಬ ಪುರುಷರು ತನ್ನ ಹೆಂಡತಿಯರಿಗೆ ಅವರು ಬಡವರಾಗಲೀ, ಸಿರಿವಂತರಾಗಿರಲಿ ಜೀವನಾಂಶವನ್ನು ಕಲ್ಪಿಸಲು ಬದ್ದನಾಗಿದ್ದಾನೆ. ಅದೇ ಪ್ರಕಾರ, ಅವನ ಸಹಾಯ ಅಗತ್ಯವಿರುವ ತಂದೆ ತಾಯಿಗಳಿಗೂ ಪೋಷಣೆಯನ್ನು ಒದಗಿಸಲು ಅವನು ಬದ್ಧನು ಮತ್ತು ಆಸ್ತಿ ಪಾಸ್ತಿ ಇಲ್ಲದ ತನ್ನ ಅಪ್ರಾಪ್ತ ವಯಸ್ಕ ಮಕ್ಕಳನ್ನು ಕೂಡ ಪೋಷಿಸಲು ಅವನು ಹೊಣೆಗಾರನಾಗಿರುತ್ತಾನೆ.

ಗಂಡು ಮಕ್ಕಳು ಪ್ರಬುದ್ಧರಾದ ಮೇಲೆ ಅವರು ಯಾವುದೇ ದೈಹಿಕ ನ್ಯೂನತೆಗೆ ಅಥವಾ ಅಂಗವಿಕಲತೆಗೆ ಒಳಗಾಗಿರದಿದ್ದರೆ, ಮತ್ತು ಹೆಣ್ಣು ಮಕ್ಕಳು ಮದುವೆಯಾಗಿ ಗಂಡನ ಮನೆಗೆ ಹೋಗಿ ಅವರವರ ಗಂಡಂದಿರೊಡನೆ ದಾಂಪತ್ಯ ಜೀವನವನ್ನು ನಡೆಸಿದ ಮೇಲೆ ಅವರ ರಕ್ಷಣೆಗೆ ಅವನು ಹೊಣೆಗಾರನಲ್ಲ, ಇವರನ್ನುಳಿದು ಇತರರನ್ನು ರಕ್ಷಿಸಲು ಅವನು ಹೊಣೆಗಾರನು.

ಸ್ಥಿತಿವಂತನೂ, ಅನುಕೂಲವುಳ್ಳವನೂ ಆದ ಗಂಡನು ತನ್ನ ಹೆಂಡತಿಯ ಸಹಾಯಕ್ಕೆ ಸೇವಕರನ್ನು ನೇಮಿಸಿ ಸೌಕರ್ಯ ಮಾಡಿಕೊಡಬೇಕು.

**ಟಿಪ್ಪಣಿಗಳು**

೧ ಮ.ಭ.ಪೆರ್ಲ, ಭಾರತೀಯ ವಿವಾಹ ಸಂಸ್ಕಾರ, ಕನ್ನಡ ಪ್ರಪಂಚ ಪ್ರಕಾಶನ, ಪುತ್ತೂರು, ೨೦೦೦, ಪು.ಸಂ.

೨. ಡಾ. ಗಾಯತ್ರಿ ನಾವಡ, ಮಹಿಳಾ ಸಂಕಥನ ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೩, ಪು.ಸಂ, ೧೮೬.

೩. ಪ್ರೊ.ಎಂ.ನಾರಾಯಣ, ಭಾರತೀಯ ಸಮಾಜ, ಚೇತನ ಬುಕ್ ಹೌಸ್, ಮೈಸೂರು, ಪು.ಸಂ.೬೮

೪. ಸಿ.ಬಿ. ಮನೋಹರ್ ಕುಮಾರ್, ಭಾರತೀಯ ಸಮಾಜ ಅಧ್ಯಯನ ಪು.ಸಂ. ೪೮, ೪೯.

೫. ಡಾ. ಶಾಂತ ಇಮ್ರಾಪೂರ, ಧರ್ಮ-ಮಹಿಳೆ ಮತ್ತು ಸಮಾಜ, (ಧರ್ಮ ಮತ್ತು ಮಹಿಳೆ) ಚೇತನ ಪ್ರಕಾಶನ, ಧಾರವಾಡ, ೨೦೦೧, ಪು.ಸಂ. ೯

೬. ಡಾ. ಷಹಸೀನಾ ಬೇಗಂ, ಕರ್ನಾಟಕ ಮುಸ್ಲಿಂ ಜಾನಪದ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೦, ಪು.ಸಂ. ೧೨೪.

೭. ಡಾ. ಷಹಸೀನಾ ಬೇಗಂ, ಕರ್ನಾಟಕ ಮುಸ್ಲಿಂ ಜಾನಪದ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೦, ಪು.ಸಂ. ೧೩೭.

* * *

## ಅಧ್ಯಾಯ : ಐದು

## ಸಮಾರೋಪ

### ೫.೧. ಕ್ಷೇತ್ರಕಾರ್ಯ ಆಧಾರಿತ ಅಧ್ಯಯನದ ಸಮೀಕ್ಷೆ

'ಮುಸ್ಲಿಂ ಮಹಿಳೆಯ ಸಾಮಾಜಿಕ ಬದುಕು' ಅಧ್ಯಯನವು ಮುಸ್ಲಿಂ ಮಹಿಳಾ ಸಂವೇದನೆಯ ಸಮಾನತೆಯ ದಾಹದ ನಿರೂಪಣೆ ನ್ಯಾಯ ನೈತಿಕತೆಯ ಇದರ ಅಂತರಾಳ ಶುಷ್ಕವಾದ ಬೌದ್ಧಿಕ ಮಾನವೀಯತೆಯ ಅಂತಃಕರಣವನ್ನು ಮತ್ತೆ-ಮತ್ತೆ ನೆನಪಿಸುವುದು, ಒತ್ತಾಯಿಸುವುದು ಇಲ್ಲಿ ವಿಶೇಷವಾಗಿ ನಿರೂಪಿತವಾಗಿದೆ. ಸಂಸ್ಕೃತಿ ವಿಕಾಸದ ಜಾಡಿನಲ್ಲಿ ನಾಗರೀಕರಣವಾದ ಆಧುನಿಕ ಜಗತ್ತು ನಿರಂತರವಾಗಿ ಸ್ತ್ರೀ ಸಮುದಾಯವನ್ನು ಹಂತ-ಹಂತವಾಗಿ ಹೇಗೆ ವಂಚಿಸಿದೆ ಎಂಬುದನ್ನು ಸ್ಥಳೀಯ ವಿವರಗಳಿಂದ ಜಾತಿ, ಧರ್ಮ, ಪುರುಷ ವ್ಯವಸ್ಥೆಗಳ ತಂತ್ರಗಳಿಂದ ಪರಿಶೀಲಿಸಲಾಗಿದೆ. ಹೀಗಾಗಿ ಈ ಅಧ್ಯಯನವು ಏಕ ಕಾಲಕ್ಕೆ ಸ್ಥಳೀಯವಾಗುತ್ತಲೇ ಜಾಗತಿಕವಾದ ಆಯಾಮಗಳಿಂದಲೂ ಲಿಂಗ ಸಮಾನತೆಯ ಹಕ್ಕೊತ್ತಾಯವನ್ನು ಮಂಡಿಸುತ್ತದೆ.

ಹೀಗೆ ನ್ಯಾಯಿಕ ಧರ್ಮವನ್ನು ಅಪೇಕ್ಷಿಸುವ ಈ ಅಧ್ಯಾಯನವು ಹೆಚ್ಚಾಗಿ ಪುರುಷ ಮನೋಧರ್ಮದ ಮಿತಿಗಳನ್ನು ಆಧಾರವಾಗಿಟ್ಟುಕೊಂಡು ಮಹಿಳೆಯರ ಮೇಲಿನ ದೌರ್ಜನ್ಯಗಳನ್ನು ವಿಶ್ಲೇಷಿಸುತ್ತದೆ. ಪುರುಷ ವ್ಯವಸ್ಥೆಯು ಪರಿಪೂರ್ಣವಾಗಿ ಖಳನಾಯಕ ಪಾತ್ರಕ್ಕೆ ಅರ್ಹವಾದುದಲ್ಲ, ಅದು ಕೂಡ ಈ ಜೀವಜಾಲದ ನಿಸರ್ಗದ ಭಾಗವಾಗಿಯೇ ಸ್ತ್ರೀ ಸಮುದಾಯದ ಜೊತೆಗೆ ಬೆಳೆದು ಬಂದಿದೆ. ಅಂದ ಮೇಲೆ ಸ್ತ್ರೀ ಸಮುದಾಯಕ್ಕಿರುವ ಅನೇಕ ನೈಸರ್ಗಿಕ ಭಾವನಾತ್ಮಕ ಹಾಗೂ ನ್ಯಾಯದ ಗುಣಗಳು ಕಡ್ಡಾಯವಾಗಿ ಇದ್ದೇ ಇರುತ್ತವೆ. ಪುರುಷ ಲೋಕದ ಒಳಗಿನ ಅಂತಹ ಗುಣಗಳನ್ನು ಪುನರ್ ಅನ್ವಯ ಮಾಡಿಕೊಳ್ಳಲು ಬೇಕಾದ ಸಂಬಂಧವನ್ನು ಸ್ತ್ರೀ ಸಮುದಾಯ ಮಾಡಬೇಕು. ಒಳ್ಳೆಯ ಹಾಗೂ ಕೆಟ್ಟ ೨ ಸ್ವಭಾವಗಳು ಇಬ್ಬರೂ ಮನುಷ್ಯರಾದ್ದರಿಂದ ಇಬ್ಬರಲ್ಲೂ ಬೆರೆತುಕೊಂಡು ಬಂದಿವೆ. ಮನುಷ್ಯನ ಸ್ವಭಾವದಲ್ಲಿರುವ ಕೇಡನ್ನು ಕಳೆದುಕೊಂಡು ವಿಕಾಸ ಸಾಧ್ಯತೆಗೆ ತನ್ನನ್ನು ತಾನು ಬದ್ಧನಾಗಿಸಿಕೊಳ್ಳುವುದೇ ನಾಗರೀಕತೆಯ ಲಕ್ಷಣ, ಇಷ್ಟದರೂ ಕೇಡಿನ ಅಂಶ ಕಡಿಮೆ ಆಗುತ್ತಲೇ ಇಲ್ಲ. ಇದಕ್ಕಾಗಿ ಸ್ತ್ರೀ ಪುರುಷ ಸಂಬಂಧಗಳೆರಡೂ ದುಡಿಯಬೇಕಾಗಿದೆ.

ಸಕಲ ಜೀವರಾಶಿಗಳಿಗೂ ಒಳಿತನ್ನು ಬಯಸುವ ಜೀವನ ದೃಷ್ಟಿಯನ್ನು ಧರ್ಮ ಎನ್ನಬಹುದು. ಯತೋಭ್ಯುದಯ ನಿಶ್ರೇಯಸ ಸಿದ್ಧಿಃ ಸಧರ್ಮಃ ಎನ್ನುವುದು ಆರ್ಷೇಯ ಸೂತ್ರ. ಯಾವುದರಿಂದ ಅಭ್ಯುದಯವೂ, ಶ್ರೇಯಸ್ಸು ಸಿದ್ಧಿಸುವುದೋ ಅದೇ ಧರ್ಮ, ಧರ್ಮದ ಮೂಲ ಉದ್ದೇಶ ಅಪಮೌಲ್ಯಗೊಂಡು ಮತ ಧರ್ಮದ ಅರ್ಥವನ್ನು ಪಡೆಯಿತು. ಇದರೊಂದಿಗೆ ಆಚರಣೆಗಳನ್ನು ತಳುಕು ಹಾಕಿ, ಧಾರ್ಮಿಕ ವಿಧಿವಿಧಾನಗಳನ್ನು ರೂಪಿಸಿ ಸಂಪ್ರದಾಯವೆಂದು ಕರೆಯಲಾಯಿತು.

ಧರ್ಮದೃಷ್ಟಿಯ ಜೀವನ ನಿರ್ವಹಣೆಗಾಗಿ ಸಮಾಜವು ಕೆಲವು ಮೌಲ್ಯಗಳನ್ನು ರೂಪಿಸಿಕೊಂಡಂತೆ ತೋರುತ್ತದೆ. ಅಂದಂದಿನ ಬದುಕಿನ ಸನ್ನಿವೇಶ ಸಂದರ್ಭಗಳಿಗನುಗುಣವಾಗಿ ಮೌಲ್ಯಗಳು ಬದಲಾಗುತ್ತಲೇ ಇರಬೇಕಾಗುತ್ತದೆ. ಭಾರತದಲ್ಲಿ ಸಾಮಾಜಿಕ ವ್ಯವಸ್ಥೆ ಬಿಗಿಯಾಗುತ್ತಾ ಬಂದಂತೆಲ್ಲಾ ಪ್ರಬಲ ವರ್ಗವು ತನಗೆ ಬೇಕಾದಂತೆ ಧರ್ಮ, ಸಂಪ್ರದಾಯ, ಮೌಲ್ಯಗಳಿಗೆ ವ್ಯಾಖ್ಯಾನ ನೀಡಿ ಅಸಂಗತವಾದುದನ್ನು, ಅಮಾನವೀಯವಾದುದನ್ನು ಉಳಿಸಿಕೊಂಡಿತು.

ಸಮಾಜದಲ್ಲಿ ನಿರ್ಣಾಯಕ ಸ್ಥಾನವನ್ನು ಆಕ್ರಮಿಸಿದ ಪ್ರಬಲ ವರ್ಗವು ದುರ್ಬಲ ಜಾತಿ ವರ್ಗ ಲಿಂಗಗಳ ಸೃಷ್ಟಿಗೆ ಕಾರಣವಾಯಿತು. ತನ್ನ ಅಡಿಯಾಳಾಗಿ, ಇವರೆಲ್ಲ ಇರಬೇಕೆಂದು ಬಯಸಿದ್ದರ ಪರಿಣಾಮವಾಗಿ ದುರ್ಬಲರು ನಲುಗಿ ಹೋಗುವ ಪರಿಸ್ಥಿತಿ ನಿರ್ಮಾಣವಾಯಿತು.

ಧರ್ಮ ಸಂಪ್ರದಾಯಗಳ ಹೆಸರಿನಲ್ಲಿ ಮಹಿಳೆ ನಲುಗುತ್ತಿರುವುದು ಯಾವುದೇ ಒಂದು ಧರ್ಮಕ್ಕೆ ಸೀಮಿತವಲ್ಲ. ಇಡೀ ಮನುಕುಲವೇ ಆಕೆಯನ್ನೂ ಹಾಗೆ ನಡೆಸಿಕೊಳ್ಳುತ್ತಿದೆ. ಇಸ್ಲಾಂ ಧರ್ಮದ ಅಡಿಯಲ್ಲಿ ಸಿಕ್ಕಿ ನರಳುತ್ತಿರುವ ಹೆಣ್ಣಿನ ಅಸಹಾಯಕ ಸ್ಥಿತಿ ಹೇಳತೀರದು.

ಇಸ್ಲಾಂ ಧಾರ್ಮಿಕ ವ್ಯವಸ್ಥೆಯಲ್ಲಿ ಬಹುತೇಕ ಸ್ತ್ರೀಯರಿಗೆ ಸ್ವಾತಂತ್ರ್ಯಕ್ಕಿಂತ ನಿರ್ಬಂಧಗಳೇ ಹೆಚ್ಚು. ಪರದಾ, ಅನಕ್ಷರತೆ, ಅನಾರೋಗ್ಯ, ಅಜ್ಞಾನ ಇವೇ ಮುಂತಾದ ಪಿಡುಗುಗಳಿಗೆ ಬಲಿಯಾಗುವ ಮಹಿಳೆಯರಿಗೆ ಧರ್ಮದ ಹೆಸರಿನಲ್ಲಿ ಸಮಾಜ ಹೇರಿರುವ ದಿಗ್ಬಂಧನದಿಂದ ಸುಲಭದಲ್ಲಿ ಬಿಡುಗಡೆಯಿಲ್ಲ. ಪುರುಷ ಪ್ರಧಾನ ಮೌಲ್ಯಗಳು ಹಾಗೂ ಆಚರಣೆಗಳೇ ಅಧಿಕವಾಗಿರುವ ಇಸ್ಲಾಂ ಧರ್ಮದಲ್ಲಿ ಸ್ತ್ರೀಯು ಸಾಧಿಸಿರುವ ಪ್ರಗತಿಯ ಪ್ರಮಾಣ ತೀರಾ ಕಡಿಮೆ, ಕಾನೂನು ಬದಲಾವಣೆಗಳಿಗೆ ಪೂರಕವಾಗಿದ್ದರೂ ಧರ್ಮದ ಹೆಸರಿನಲ್ಲಿ ಪುರುಷ ಪ್ರಧಾನ ವ್ಯವಸ್ಥೆ ಒಡ್ಡಿರುವ ಸವಾಲುಗಳನ್ನು ಮೆಟ್ಟಿ ನಿಲ್ಲುವಂಥ ಶಕ್ತಿಯನ್ನು ಇಸ್ಲಾಂ ಧರ್ಮೀಯ ಮಹಿಳೆಯರು ಪಡೆದಾಗಲೇ ಅವರ ಪರಿಸ್ಥಿತಿಯಲ್ಲಿ ಸಮಗ್ರ ಬದಲಾವಣೆ ಸಾಧ್ಯ. (ಮಹಿಳೆ ಸಮಾಜ ಮತ್ತು ಸಂಸ್ಕೃತಿ, ಪು.ಸಂ. ೧೧೫)

ಮುಸ್ಲಿಂ ಸಮುದಾಯದಲ್ಲಿ ಬೆಳೆದು ಬಂದಿರುವಂತಹ ರೂಢಿಗಳು, ಸಂಪ್ರದಾಯಗಳು, ಆಚರಣೆಗಳು, ಇವೆಲ್ಲವೂಗಳು ಮುಸ್ಲಿಂ ಮಹಿಳೆ ಮೇಲೆ ಅತ್ಯಂತ ಗಾಢವಾದ ಪರಿಣಾಮಗಳನ್ನು ಬೀರಿವೆ. ಸಂಪ್ರದಾಯಗಳು, ನಂಬಿಕೆಗಳಲ್ಲವೂ ಮಹಿಳೆಯರನ್ನು ದ್ವಿತೀಯ ದರ್ಜೆಯಲ್ಲಿಟ್ಟು ಅವಳ ಅಸ್ತಿತ್ವದ ಹುಡುಕಾಟಕ್ಕೆ ದಾರಿ ಮಾಡಿಕೊಡದಂತೆ, ಪ್ರತಿಯೊಂದು ಸಂದರ್ಭದಲ್ಲಿಯೂ ಕಡಿವಾಣವನ್ನು ಹಾಕುತ್ತಾ ಬರಲಾಗಿದೆ.

ಮುಸ್ಲಿಂ ಸಮುದಾಯದಲ್ಲಿ ಹೆಣ್ಣನ್ನು ಯಾವಾಗಲು ಅಧಿಕಾರವಿಲ್ಲದ ಅಧೀನವಾದ, ಪರಾವಲಂಬಿಯಾಗಿ, ರಕ್ಷಣೆಯನ್ನು ಪಡೆಯುವವಳಾಗಿಯೇ ಕಾಣುತ್ತಾ ಬರಲಾಗಿದೆ. ಮುಸ್ಲಿಂ ಹೆಣ್ಣಿಗೆ ಅವಳದೇ ಆದ ವ್ಯಕ್ತಿತ್ವವಿಲ್ಲದೆ, ಸದಾ ಪುರುಷನಿಂದ ತನ್ನ ವ್ಯಕ್ತಿತ್ವ ಮತ್ತು ಅಸ್ತಿತ್ವವನ್ನು ಗುರ್ತಿಸುವಂತಾಗಿದೆ. ಪುರುಷ ಪ್ರಾಬಲ್ಯವಿರುವ ಸಮಾಜವು ಹೆಣ್ಣಿಗೆ ಯಾವುದೇ ರೀತಿಯ ಮಹತ್ವ ನೀಡಿಲ್ಲ. ಬದಲಿಗೆ ಸಂಪ್ರದಾಯಗಳ ಹೆಸರಿನಲ್ಲಿ ಎಷ್ಟು ಸಾಧ್ಯವೋ ಅಷ್ಟು ಅವಳ ಮೇಲೆ ಬಂಧನವನ್ನು ಹೇರುತ್ತಾ ಬರಲಾಗಿದೆ.

ಸಾಮಾಜಿಕ ಮೌಲ್ಯಗಳೆನಿಸಿದ ಕುಟುಂಬ, ಮದುವೆ, ಸಂಪ್ರದಾಯ, ನಂಬಿಕೆಗಳು, ಧರ್ಮ, ಇವೆಲ್ಲವೂ ಮಹಿಳೆಯನ್ನು ಆಳುತ್ತಲೇ ಬಂದಿರುವುದರಿಂದ ಅವಳು ತನ್ನ ಅಸ್ತಿತ್ವದ ಹುಡುಕಾಟದಲ್ಲಿ ವಿಫಲಳಾಗುತ್ತಿದ್ದಾಳೆ. ಪುರುಷ ಪ್ರಧಾನ ವ್ಯವಸ್ಥೆಯ ಚೌಕಟ್ಟಿನಲ್ಲಿರುವ ಮಹಿಳೆಗೆ ವ್ಯವಸ್ಥೆಯ ಕಬಂಧ ಬಾಹುಗಳಲ್ಲಿ ಬಂಧಿಸಿರುವುದರಿಂದ, ಅವಳು ಈ ಕಬಂಧ ಬಾಹ್ಯಗಳಿಂದ ಸ್ವತಂತ್ರಳಾಗಿ ವಿಮುಕ್ತಿ ಪಡೆಯಲು, ತನ್ನದೇ ಆದ ಅಸ್ತಿತ್ವವನ್ನು ಗುರ್ತಿಸಿ, ಪುರುಷ ಪ್ರಧಾನ ವ್ಯವಸ್ಥೆಯು ನಿರ್ಮಿಸಿದಂತಹ ಚೌಕಟ್ಟನ್ನು ಒಡೆದು, ಆ ಚೌಕಟ್ಟಿನ ಪುನರ್ ನಿರ್ಮಾಣದ ಕಾರ್ಯ ಮಾಡಬೇಕಿದೆ.

ಇಸ್ಲಾಂ ಧರ್ಮ ಹೊಂದಿರುವ ದೃಷ್ಟಿಕೋನ ಪುರುಷ ಕೇಂದ್ರಿತವಾಗಿದೆ. ಮಹಿಳೆಯ ದೇಹದ ಕುರಿತು ಕಟ್ಟಿಕೊಟ್ಟ ಗ್ರಹಿಕೆಗಳು ಅವಳನ್ನು ೨ನೇ ದರ್ಜೆ ಪ್ರಜೆಯನ್ನಾಗಿಸಿದೆ.

ಮುಸ್ಲಿಂ ಜನಾಂಗದಲ್ಲಿ ಹೆಚ್ಚಿನ ಮಕ್ಕಳನ್ನು ಪಡೆಯುವುದನ್ನು ನೋಡಬಹುದು. ಮಹಿಳೆಗೆ ಇಲ್ಲಿ ಭೋಗದ ವಸ್ತುವನ್ನಾಗಿ, ಮಕ್ಕಳನ್ನು ಹೇರುವ ಯಂತ್ರವನ್ನಾಗಿ ರೂಪಿಸಲಾಗಿದೆ. ಹೆಂಡತಿ ಹೆಚ್ಚು ಮಕ್ಕಳನ್ನು ಪಡೆದಂತೆಲ್ಲಾ ಪುರುಷ ತಾನು ದೈಹಿಕವಾಗಿ ಬಲಾಢ್ಯನಿದ್ದೇನೆ ಹಾಗೂ ತನ್ನ ಪುರುಷತ್ವ ಹೆಚ್ಚು ಬಲಿಷ್ಟವಾಗಿದೆ. ಎಂದು ಸಮರ್ಥಿಸಿಕೊಳ್ಳುವ ಬಗ್ಗೆ ಅಸಮಧಾನಪಡಿಸಿದ್ದಾರೆ. ಸಂದರ್ಶಿತ ಮುಸ್ಲಿಂ ಮಹಿಳೆ ಈಕೆ ಪ್ರಾಥಮಿಕ (ಉರ್ದು) ಶಾಲೆಯ ಶಿಕ್ಷಕಿಯಾಗಿದ್ದು, ಈಕೆಯನ್ನು ಸಂದರ್ಶನಕ್ಕೆ ಒಳಪಡಿಸಿದಾಗ, ಈಕೆಗೆ ಹೆಚ್ಚು ಮಕ್ಕಳನ್ನು ಪಡೆದು, ಅವರೆಲ್ಲರ ಭವಿಷ್ಯವನ್ನು ಅತಂತ್ರವಾಗಿಸುವುದಕ್ಕಿಂತ, ಒಂದೋ ಅಥವಾ ಎರಡು ಮಕ್ಕಳನ್ನು ಪಡೆದು ಅವರ ಭಾವಿ ಜೀವನವನ್ನು ಸುಂದರಗೊಳಿಸಬೇಕಾಗಿ ಅತಿಯಾದ ಹಂಬಲ ಹೊಂದಿರುವುದಾಗಿಯೂ ತಿಳಿಸಿದ್ದಾಳೆ. ಆದರೆ ಈಕೆಯ ಆಸೆಗಳಿಗೆ ವ್ಯತಿರಿಕ್ತವಾದ ಗಂಡನಾದವನು ಆಕೆಗೆ ಸಹಕರಿಸದೆ ಇರುವುದು ಕಂಡು ಬಂದಿತು. ಸ್ವಲ್ಪ ಮಟ್ಟದ ಶಿಕ್ಷಣ ಪಡೆದಿದ್ದರೂ ಸಹ ಗಂಡನ ಇಂತಹ ಅರ್ಥವಿಲ್ಲದ ವಿಚಾರಗಳಿಂದ ದೈಹಿಕವಾಗಿ, ಮಾನಸಿಕವಾಗಿ ಸಾಕಷ್ಟು ನೋವನ್ನು ಅನುಭವಿಸಿರುವುದಾಗಿ ತಿಳಿದುಕೊಂಡಿದ್ದೇನೆ.

ಮುಸ್ಲಿಂ ಹೆಣ್ಣಿನ ಬದುಕು ಮಕ್ಕಳ ಪಾಲನೆ ಪೋಷಣೆಯಲ್ಲಿ ಹೆಚ್ಚು ಶಕ್ತಿ, ಸಮಯ ವಿನಿಯೋಗವಾಗುತ್ತಿದೆ. ಈ ಮಹಿಳೆಯು (ನೂರ್‌ಜಹಾನ್) ತನಗೆ ಹೆಚ್ಚು ಮಕ್ಕಳು ಬೇಡ ಎಂದು ಸಂತಾನ ನಿಯಂತ್ರಣ ಮಾಡಲು ಗಂಡನ ಅನುಮತಿ ಕೇಳಿದಾಗಲೂ, ಗಂಡನ ಪ್ರತಿರೋಧ, ಹಾಗೆಯೇ ಈಕೆ ಹೇಳುವ ಹಾಗೆ ಧಾರ್ಮಿಕ ಮುಖಂಡರು ಸಂತಾನ ನಿಯಂತ್ರಣವನ್ನು ಖಂಡಿಸಿದ್ದಾರಂತೆ.

ಬಹುಶಃ ಧರ್ಮ ಗ್ರಂಥ ರಚನಕಾರರು ಪುರುಷರೆ ಆಗಿರುವುದರಿಂದ ಕುರಾನ್‌ನಲ್ಲಿ ಸಂತಾನ ನಿಯಂತ್ರಣ ಮಾಡಬಾರದೆಂದು ನಿರ್ವಚಿಸಲಾಗಿದೆ. ಎಂದು ಧಾರ್ಮಿಕ ಮುಖಂಡರು ಮುಸ್ಲಿಂ ಮಹಿಳೆಯನ್ನು ಹೆರುವಯಂತ್ರವನ್ನಾಗಿ ರೂಪಿಸಿದ್ದಾರೆ. ಪುರುಷ ನಿರ್ಮಿತವಾದ ಧರ್ಮ ಇರುವುದರಿಂದ ಧರ್ಮದ ಹೆಸರಿನಲ್ಲಿ ಅವಳನ್ನು ಹತೋಟಿ ಮಾಡಲಾಗಿದೆ. ಎಂಬುದು ನನ್ನ ಅಭಿಪ್ರಾಯ, ಹಾಗೂ ಮುಸ್ಲಿಂ ಧಾರ್ಮಿಕ ಚಿಂತನೆಗಳ ಬಗ್ಗೆ, ನಿಯಮಗಳ ಬಗ್ಗೆ ಅಸಮಾಧಾನ ಹೊಂದಿದವರನ್ನು ಸಂದರ್ಶನ ಮಾಡಿದಾಗ ತಿಳಿದು ಬಂದ ಅಂಶ.

ಹಾಗೆಯೇ ಮುಸ್ಲಿಂ ಮಹಿಳೆಗೆ ವಿವಾಹವನ್ನು ಕಡ್ಡಾಯಗೊಳಿಸಿರುವ ಸಮಾಜವು ಆಕೆ ಅವಿವಾಹಿತಳಾಗಿ ಬದುಕಲು ಬಿಡುವುದಿಲ್ಲ. ಗೃಹಿಣಿಯಾಗಿ ಗಂಡನ ಬೇಕು ಬೇಡಗಳನ್ನು ಗಮನಿಸುತ್ತಾ ಅವನನ್ನು ಅನುಕರಿಸುವುದೇ ಆಕೆಯ ಬದುಕಿನ ಪರಮೋದ್ದೇಶ ಎಂದು ಆಕೆಯನ್ನು ನಿರ್ಬಂಧಿಸುತ್ತಲೇ ಬಂದ ಈ ವ್ಯವಸ್ಥೆಯು ಅವಳಿಗೆ ವೈಧವ್ಯ ಒದಗಿದಾಗ ಇದಕ್ಕೆ ವಿರುದ್ಧವಾಗಿ ವರ್ತಿಸುತ್ತದೆ. ಪುನರ್ವಿವಾಹಕ್ಕೆ ಸಮ್ಮತಿಸದೆ ಒಂಟಿಯಾಗಿ ಬಾಳಲು ಒತ್ತಾಯಿಸುತ್ತದೆ. ಹೆಂಡತಿ ಸತ್ತ ಸೂತಕ ಕಳೆಯುತ್ತಲೇ ಗಂಡಸರು ಇನ್ನೊಂದು ಮದುವೆಯಾಗಬಹುದು. ಒಂದೇ ಏಕೆ ಇನ್ನೊಂದು ಆಗಬಹುದಂತೆ ವಿಪರ್ಯಾಸವಾದರೂ, ವಾಸ್ತವ, ಆದರೆ ಹೆಂಗಸಿಗೆ ಇಂಥ ಅವಕಾಶವನ್ನು ನಿರಾಕರಿಸಲಾಗಿದೆ.

ಹಾಗೆಯೇ ಕುಟುಂಬ ವ್ಯವಸ್ಥೆಯಲ್ಲಿನ ಉಸಿರುಕಟ್ಟಿಸುವ ವಾತವರಣದ ಅರಿವಿದ್ದರೂ, ಅದರಿಂದ ಹೊರಬರಲಾರದೆ, ಆ ವರ್ತುಲದಲ್ಲಿಯೇ ಸುತ್ತುವ ಮೌಲ್ಯಗಳಂತೂ ಇನ್ನೂ ಅಮಾನವೀಯ.

ಮುಸ್ಲಿಂ ಕುಟುಂಬಗಳಲ್ಲಿನ ಮಹಿಳೆಯರ ಬದುಕು ಸಮಸ್ಯೆಗಳ ರೂಪವಾಗಿದೆ. ಈ ಮಹಿಳೆಯರಿಗಿರುವ ಸಮಸ್ಯೆಯನ್ನು ತಿಳಿದು, ಆಕೆ ಯಾವ ರೀತಿಯ ಬದುಕು ಸಾಗಿಸುತ್ತಿದ್ದಾಳೆ. ಎಂಬುದನ್ನು ಶೈಕ್ಷಣಿಕ, ಧಾರ್ಮಿಕ, ಸಾಮಾಜಿಕವಾದ ನೆಲೆಗಳಿಂದ ಕಂಡುಕೊಳ್ಳಲಾಗಿದೆ.

ಭಾವನಾತ್ಮಕ ಪಾತಳಿಯಲ್ಲಿಯೇ ಸುತ್ತುವ ಮುಸ್ಲಿಂ ಹೆಣ್ಣಿನ ಮನಸ್ಸು ಎಷ್ಟೇ ಅನಾನುಕೂಲಗಳಿದ್ದರೂ ತೆಗೆದುಕೊಳ್ಳುವ ನಿರ್ಧಾರವು ವ್ಯಕ್ತಿಯ ನೆಲೆಗಿಂತ ಸಮಾಜ ನಿರ್ಮಿತ, ಧರ್ಮ ನಿರ್ಮಿತ, ಹಾಗೂ ಪುರುಷ ನಿರ್ಮಿತ, ಮೌಲ್ಯಗಳ ಕಡೆಗೆ ವಾಲುತ್ತದೆ. ಮುಸ್ಲಿಂ ಮಹಿಳೆಯರು ತಮ್ಮ ಬದುಕಿನಲ್ಲಿ ಎಂದೂ ಪ್ರತಿರೋಧವನ್ನು ತೋರಿಸುವುದಿಲ್ಲ. ಮೂಲಭೂತ ಅಭಿಪ್ರಾಯಗಳಿಗೆ ಆಕೆಯ ಪ್ರತಿಭಟನೆ ಇರುವುದೇ ಅಪರೂಪ ಎಂದೆನಿಸಿತು.

ಉಪವಾಸ, ಕಲ್ಮಾ, ನಮಾಜ್, ನಂಬಿಕೆ, ಆಚರಣೆಗಳೆಲ್ಲವನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡಿದ್ದರೂ ಮೂಲತಃ ಇವರು ತಮ್ಮ ನಡೆನುಡಿಗಳಲ್ಲಿ, ಧಾರ್ಮಿಕ ಆಚರಣೆಗಳಲ್ಲಿ, ಸಂಸ್ಕೃತಿ ಹೀಗೆ ಎಲ್ಲಾದರಲ್ಲೂ ತಮ್ಮ ಪ್ರಭಾವವನ್ನು ಮೂಡಿಸಿಕೊಂಡು ಬದುಕುತ್ತಿದ್ದಾರೆ.

ಮುಸ್ಲಿಂ ಸಾಮಾಜಿಕ, ಧಾರ್ಮಿಕ ನಿಷೇಧಗಳು ಮಹಿಳೆಯರನ್ನು ೪ ಗೋಡೆಗಳ ಮಧ್ಯೆ ಪುರುಷನ ಅಧಿಪತ್ಯದ ಅಡಿಯಲ್ಲಿ ಸೆರೆಯಾಳಾಗಿಸಿದೆ. ಮುಸ್ಲಿಂ ಸಾಮಾಜಿಕವಾದ ಅವಕಾಶದಲ್ಲಿ ಹೆಣ್ಣಿಗಿರುವ ಸ್ಥಾನವು ಕನಿಷ್ಟ ತಮವಾದದು, ಬಹಿರಂಗವಾಗಿ ಈ ಮಹಿಳೆಯರು ಎಲ್ಲೂ ತನ್ನ ಸ್ವಂತ ಅಪೇಕ್ಷೆಗಳನ್ನು ತೋರಿಸಿಕೊಳ್ಳುವಂತಿಲ್ಲ. ಪುರುಷ ಸಮಾಜವು ಎಷ್ಟೊಂದು ಕ್ರೂರವಾಗಿ ಬಲೆ ಹೆಣೆದಿದೆ ಎಂದರೆ, ಹೆಣ್ಣು ಬದುಕಿದ್ದು ಸತ್ತಂತೆ ಬಾಲ

ರೂಪಿಸಿದೆ. ಗೌರವದ ಅಲಂಕಾರದ ಮುಸುಕನ್ನು ಹೆಣ್ಣಿನ ಸಾಯುವ ತನಕ ಪರರನ್ನು ಅವಲಂಬಿಸಿಯೇ ಬದುಕು ಸಹಿಸಬೇಕಾದ್ದಿದೆ. ಸಾರ್ವಜನಿಕವಾದ ಯಾವ ಚಹರೆಯೂ ಈ ಸಮುದಾಯದ ಮಹಿಳೆಯರಿಗಿಲ್ಲ. ಸಮಾಜದಲ್ಲಿ ಆಕೆ ಯಾವತ್ತು ತಲೆ ತಗ್ಗಿಸಿಯೇ ನಡೆಯಬೇಕು. ಬಹಿರಂಗವಾಗಿ ಏನೂ ಮಾತನಾಡುವಂತೆಯೂ ಇಲ್ಲ ಈ ಹಿನ್ನೆಲೆಯಲ್ಲಿ ಬೆಳೆದು ಬಂದ ಪುರುಷ ಸಮಾಜವು ಹೆಣ್ಣಿನ ಮೇಲೆ ಧರ್ಮ ಮತ್ತು ಸಂಸ್ಕೃತಿಯ ಹೆಸರಿನಲ್ಲಿ ಅನೇಕ ನಿಷೇಧಗಳನ್ನು ಹೇರಿದೆ.

ಹೀಗೆ ಹಲವು ಬಗೆಯ ನಿಷೇಧಗಳನ್ನು ಹೆಣ್ಣಿನ ಸಂದರ್ಭದಲ್ಲಿ ಪಟ್ಟಿ ಮಾಡುತ್ತಾ ಹೋಗಬಹುದು. ಇಂತಹ ಎಲ್ಲಾ ರೀತಿಯ ನೀತಿ ನಿಯಮ ನಿರ್ಬಂಧ ನಿಷೇಧಗಳೆಲ್ಲವೂ ಹೆಣ್ಣು ಸಂಬಂಧ ಹಾಗೂ ದೇಹ ಸಂಬಂಧಗಳ ಮೂಲಕವೇ ಎಂದುದನ್ನು ಇಲ್ಲಿ ವಿಶೇಷವಾಗಿ ಪ್ರಸ್ತಾಪಿಸಿಲಾಗಿದೆ. ನಿಷೇಧ ಹೇರುವ ಪುರುಷ ಪ್ರಜ್ಞೆಯು ಹೆಣ್ಣನ್ನು ನಿಯಂತ್ರಿಸಲು ಇಂತೆಲ್ಲಾ ತಂತ್ರಗಳನ್ನು ರೂಪಿಸಿದೆ. ಸಾಮಾಜಿಕವಾಗಿ ಮಹಿಳೆಯರನ್ನು ಸೆರೆಹಿಡಿಯಲು ಪುರುಷರಿಗೆ ಸುಲಭವಾಗಿದೆ. ನಿಭಂಧಿಸುವ ಮನಸ್ಸು ಯಾವ ರೀತಿಯಿಂದಲೂ ನಿಸರ್ಗ ಬದ್ಧವಾದುದಲ್ಲ, ಹೆಣ್ಣು ಮನಸ್ಸು ಎಲ್ಲಿ ಹಿಂಸೆಗಳನ್ನು ಸಹಿಸಿಕೊಳ್ಳುವ ಸ್ತ್ರೀ ಸ್ವಭಾವವು ನಿರಂಕುಶವಾದುದಲ್ಲ.[೧]

''ಮುಸ್ಲಿಂ ಸಮಾಜದ ಮಹಿಳೆಯ ಸ್ಥಾನಮಾನಗಳು ಗಂಡಸಿನ, ಧರ್ಮದ ಕೃಪೆಯಿಂದ ತೀರ್ಮಾನವಾಗುವುದು, ಮಾನವೀಯತೆಯಲ್ಲಿ, ಸಮಾಜದ ಏಳಿಗೆಯಲ್ಲೆ ಹೆಣ್ಣಿಗೆ ಸ್ಥಾನವಿರಬೇಕು. ಹಾಗೆ ನೋಡಿದರೆ, ಹೆಣ್ಣು ಸಮಾಜದ ಅನೇಕ ಹೊರೆಗಳನ್ನು ಹೊತ್ತಿದ್ದಾಳೆ. ಆಕೆ ಕುಟುಂಬದ ಭಾರವನ್ನು ನಿರ್ವಹಿಸುತ್ತಾಳೆ. ಧರೆಗೆ ಗಿರಿಯು ಭಾರವೇ, ಗಿರಿಗೆ ಮರವು ಭಾರವೆ, ಹೆತ್ತ ತಾಯಿಗೆ ಮಗುವು ಭಾರವೆ, ಎಂಬ ನುಡಿಗಳು ಧ್ವನಿ ಪೂರ್ಣವಾಗಿವೆ. ಇದೇ ಗಂಡಸರ ಹೊರೆಯು ಹೆಣ್ಣಿನ ಮೇಲಿದೆ ಎಂಬುದು ಅತಿಶಯೋಕ್ತಿಯಂತೆ ಕಂಡರೂ, ವಾಸ್ತವದಲ್ಲಿ ಹೆಣ್ಣು ಪುರುಷ ಸಮಾಜದ ಭಾರದಿಂ ನಲುಗಿ ಹೋಗಿದೆ. ಹೆತ್ತು ಹೊತ್ತು ಯಾವ ಅಧಿಕೃತ ಚಹರೆಯೂ ಇಲ್ಲದೆ. ಕಣ್ಣು ಮುಚ್ಚುವ ಹೆಣ್ಣಿನ ಗೋಳು ಪುರುಷರ ಅಂತರಂಗಕ್ಕೆ ತಟ್ಟುವುದಿಲ್ಲ.

ಸಾಮಾಜಿಕ ನಿಷೇಧಗಳು ಹಗಲಿನಷ್ಟೇ ನಿಚ್ಚಳವಾಗಿವೆ. ಸಮಾಜದಲ್ಲಿ ಆಕೆಗಿರುವ ಸ್ಥಾನವನ್ನು ಆ ನಿಷೇಧಗಳೇ ಸೂಚಿಸುತ್ತವೆ. ಈ ಅಧ್ಯಯನದ ಉದ್ದಕ್ಕೂ ಪುರುಷ ಸಮಾಜದ ನಡವಳಿಕೆ ಹೇಗೆ ಹೆಣ್ಣಿನ ಮೇಲೆ ವಿಧಿ ನಿಯಮ ನಿಷೇಧಗಳನ್ನು ರೂಪಿಸಿದೆ ಎಂಬುದನ್ನು ಚರ್ಚಿಸಿದೆ. ಸಮಾಜದಲ್ಲಿ ಮುಸ್ಲಿಂ ಹೆಣ್ಣಿನ ಸ್ಥಾನ ಮಾನ ತುಂಬಾ ಉಪೇಕ್ಷೆಗೆ ಒಳಗಾದುದಾಗಿದೆ. ಹೆಣ್ಣನ್ನು ಸಾರ್ವಜನಿಕವಾಗಿ, ಧಾರ್ಮಿಕವಾಗಿ, ಸಾಮಾಜಿಕವಾಗಿ ನಡುಗಿಸುವಂತಹ ಪೈಶಾಚಿಕ ಪುರುಷ ಸಮಾಜದ ನಿಷೇಧಗಳು ನರಕಕ್ಕೂ ಮೀರಿದ ಹಿಂಸೆಯವು.''[೨]

ಕ್ಷೇತ್ರಕಾರ್ಯದ ಸಂದರ್ಭವೊಂದರಲ್ಲಿ, ಬಹು ಮುಖ್ಯವಾಗಿ ಗಂಡಿನ ಮನಸ್ಸು ಪೂರ್ವಗ್ರಹಕ್ಕೆ ಹೆಚ್ಚು ಬದಲಾದುದೇ ಎಂಬ ಪ್ರಶ್ನೆಯ ಮೂಲಕ ಚರ್ಚಿಸಲಾಗಿದೆ. ಈ ಸಂದರ್ಭದಲ್ಲಿ ನಾನು ಕಂಡುಕೊಂಡ ಅಂಶವೆಂದರೆ, ಸಾಮಾನ್ಯವಾಗಿ ಗಂಡಿನ ಮನಸ್ಸಿನಲ್ಲಿ ಹೆಣ್ಣು ಶೀಲದ ಬಗ್ಗೆ ಬರುವ ಎಲ್ಲಾ ವಿಚಾರಗಳು ಮಾನ ಮತ್ತು ಸ್ವಕಲ್ಪನೆಗಳ ಮೂಲಕ ಪೂರ್ವಗ್ರಹದಿಂದಲೇ ರೂಪಿತವಾಗಿದೆ. ಗಂಡಿನ ಮನಸ್ಸು ಹೆಣ್ಣನ್ನು ಖಾಸಗಿಯಾಗಿ ಭಾವಿಸಿದ್ದರೆ ಪರಿಣಾಮ ಇದು. ಅದಕ್ಕಾಗಿಯೇ ಪರದಾ ಪದ್ಧತಿಯನ್ನು ಅನುಸರಿಸುವಂತಾಗಿರಬಹುದು ಎಂದು ಊಹಿಸಿದ್ದೇವೆ.

ಸ್ತ್ರೀಯರನ್ನು ತಮ್ಮ ಖಾಸಗಿ ಆಸ್ತಿಯಾಗಿ ಪರಿಗಣಿಸಿದ್ದರಿಂದ ತನ್ನ ಆಸ್ತಿಯನ್ನು ಮತ್ತೊಬ್ಬರು ಅನುಭವಿಸಬಾರದು ಎಂಬ ಮನಸ್ಥಿತಿಯು ಸ್ವಾರ್ಥ ಅಧಿಕಾರದ ಪ್ರತಿಬಿಂಬ, ಇದು ಗಂಡು ಪ್ರಾಣಿಗಳ ಗುಣವೂ ಹೌದು, ಪ್ರಾಣಿ ಪಕ್ಷಿಗಳ ಮೃಗ ಪ್ರಭುತ್ವದಲ್ಲಿ ಅಂತಿಮವಾಗಿದ್ದು, ಅದು ತನಗೆ ಬೇಕಾದ ಎಲ್ಲಾ ಹೆಣ್ಣುಗಳನ್ನು ಅನುಭವಿಸುತ್ತದೆ. ಹೀಗೆಯೇ ಗಂಡಿನ ಸ್ವಭಾವ ಎಂದು ಹೇಳಲಿಕ್ಕೆ ಬರುವುದಿಲ್ಲವಾದರೂ ನಾಗರೀಕರಣದ ಗಂಡಿನ ಮನಸ್ಸಿನಲ್ಲಿ ಹೆಣ್ಣು ಮೇಲಿನ ಅಧಿಕಾರದ ಗುಣವು ಅಂತಹ ಗುಣಕ್ಕೆ ಒಂದಿಷ್ಟು ಹೋಗಬಲ್ಲದು. ತನಗೆ ಮಾತ್ರ ಬದ್ಧಳಾಗಬೇಕು. ಅವಳ ದೇಹ ನನಗೆ ಮಾತ್ರ ಸಂಬಂಧ ಪಟ್ಟದ್ದು ಎಂಬ ಬಿಗುಮಾನ ಇಂತಹ ಮನೋಭಾವನೆಯೂ ಯಾವುದೇ ಪುರುಷರಿಂದಲೂ ಭಿನ್ನವಾಗಿಲ್ಲ.

ಭಾರತೀಯ ಮುಸ್ಲಿಂ ಮಹಿಳಾ ಸಮಾಜ ಬಡತನ, ಅನಕ್ಷರತೆ, ಸಾಮಾಜಿಕ ಹಿಂದುಳಿಯುವಿಕೆ, ಮೂಢನಂಬಿಕೆಗಳಲ್ಲಿ ಬಳಲುತ್ತಿದೆ. ಅವರ ಬದುಕಿನ ಹಕ್ಕನ್ನು ಕಿತ್ತುಕೊಳ್ಳುತ್ತಿರುವ ಪುರುಷ ಪ್ರಾಧನ್ಯತೆಯನ್ನು ಪ್ರಶ್ನಿಸುವ ಧೈರ್ಯವೇ ಇಲ್ಲ. ಮುಸ್ಲಿಂ ಮಹಿಳೆಯು ಕಂದಚಾರಗಳಿಂದ ಮುಕ್ತವಾಗಿ, ಬಂಧನ ಕಳಚಿ ಅವಳಲ್ಲಿ ಹೊಸ ಚೈತನ್ಯ ತುಂಬುವಲ್ಲಿ ಧಾರ್ಮಿಕ ಇಚ್ಛಾಶಕ್ತಿ ಅವಶ್ಯಕವಾಗಬೇಕಾಗಿದೆ ಎಂಬುದು ನನ್ನ ಅಭಿಪ್ರಾಯ. (ಸಾರಾ ಅಬೂಬಕರ್ ಕಾದಂಬರಿ ಆಧಾರಿತ)

**೫.೨. ಸಂಶೋಧನೆಯ ಫಲಿತಗಳು**

ಮುಸ್ಲಿಂ ಹೆಣ್ಣಿನ ಮೇಲಿನ ಪುರುಷಾಧಿಪತ್ಯದ ಹಲವು ಆಯಾಮಗಳನ್ನು ಈ ಅಧ್ಯಾಯದಲ್ಲಿ ವಿವರವಾಗಿ ಚರ್ಚಿಸಲಾಗಿದೆ. ಹೆಣ್ಣಿನ ಮೇಲೆ ಹೇಗೆ ಪುರುಷ ಸಮಾಜವು ಯಜಮಾನ್ಯವನ್ನು ಸಾಮಾಜಿಕವಾಗಿ ಧಾರ್ಮಿಕವಾಗಿ, ಹಾಗೂ ಸಾಂಸ್ಕೃತಿಕವಾಗಿ ಸ್ಥಾಪಿಸಿಕೊಂಡಿದೆ. ಎಂಬುದನ್ನು ಕಾರಣಗಳ ಸಹಿತ ವಿಶ್ಲೇಷಿಸಲಾಗಿದೆ. ಹಾಗೆಯೇ ಹೇಗೆ ಲಿಂಗ ತಾರತಮ್ಯವು ಪಿತೃ ಪ್ರಧಾನ ವ್ಯವಸ್ಥೆಯ ಆಕ್ರಮಣದಿಂದ ಉಂಟಾಗಿದೆ. ಎಂಬ ಅಂಶಗಳನ್ನು ವಿಶ್ಲೇಷಣೆಯ ವಿಧಾನದಿಂದ ಪರಿಶೀಲಿಸಲಾಗಿದೆ. ಅಂತೆಯೇ ಹೇಗೆ ಲಿಂಗ ತಾರತಮ್ಯದ ಇನ್ನೊಂದು ಉಗ್ರರೂಪವಾಗಿ ಜಾತಿ ವ್ಯವಸ್ಥೆ ಕೂಡ ಹೆಣ್ಣನ್ನು ಹೇಗೆ ಹಿಂಸಿಸಿದೆ ಎಂಬುದನ್ನು ವಿವರಿಸಲಾಗಿದೆ.

ಇಲ್ಲಿ ವಿಶೇಷವಾಗಿ ಧಾರ್ಮಿಕ, ಮತ ಮೌಢ್ಯಗಳು ಮುಸ್ಲಿಂ ಮಹಿಳೆಯರ ಮೇಲೆ ಯಾವ ಬಗೆಯ ನಿರ್ಬಂಧಗಳನ್ನು ಸೃಷ್ಟಿಸಿದೆ. ಎಂಬ ಮಹತ್ವದ ಅಂಶಗಳನ್ನು ವಿಮರ್ಶಿಸಲಾಗಿದೆ. ಹಾಗೆಯೇ ಇಂತಹ ನಿರ್ಬಂಧಗಳು ಮಹಿಳೆಯರ ಬಾಹ್ಯ ಜಗತ್ತಿನ ಕಲ್ಪನೆಯು ಸಹ ಅಸಾಧ್ಯವನ್ನಾಗಿಸಿರುವುದನ್ನು ಕಾಣಲಾಗಿದೆ.

ಇಂತಹ ಶೋಷಿತ ಪ್ರವೃತ್ತಿಗಳು, ಸಾಮಾಜಿಕ ಪ್ರವೃತ್ತಿಗಳು ಸಾಮಾಜಿಕ ವ್ಯವಸ್ಥೆಯಲ್ಲಿ ಹೆಣ್ಣನ್ನು ಹೇಗೆ ಕಾಣುತ್ತವೆ ಎಂಬುದನ್ನು ವಿಶ್ಲೇಷಿಸುತ್ತಾ ಹೆಣ್ಣಿನ ಮೇಲಿನ ಧಾರ್ಮಿಕ, ಸಾಮಾಜಿಕ ನಿಷೇಧಗಳನ್ನು ಕೂಡ ಸಾಮಾಜಿಕ ನ್ಯಾಯದ ಆಶಯದಲ್ಲಿ ಶೋಧಿಸಲಾಗಿದೆ. ಹಾಗೆಯೇ ವರ್ತಮಾನದ ಸಮಾಜದಲ್ಲಿ ಹೆಣ್ಣಿನ ಮೇಲಿನ ಪುರುಷಾಧಿಪತ್ಯದ ಬೇರೆ ಬೇರೆ ಆಯಾಮಗಳನ್ನು ಸ್ತ್ರೀವಾದಿ ನೆಲೆಯಿಂದ ನಿರ್ವಚಿಸಲಾಗಿದೆ. ಹೀಗೆ ಪರಿಭಾವಿಸಿದ ಈ ಅಧ್ಯಯನದಲ್ಲಿ ಕಂಡುಕೊಂಡು ಅಂಶಗಳನ್ನು ಈ ಕೆಳಗಿನಂತೆ ಗುರ್ತಿಸಬಹುದು.

೧. ಮುಸ್ಲಿಂ ಪುರುಷ ಮನಸ್ಸು ಅತ್ಯಂತ ಪೂರ್ವಗ್ರಹದ್ದು, ಹಾಗೂ ಅದಕ್ಕೆ ಯಾವತ್ತು ಆಳುವ, ಅತಿಕ್ರಮಿಸುವ ಮತ್ತು ಅನುಮಾನಿಸುತ್ತಲೇ ಇರುವ ಸ್ವಭಾವದ್ದಾಗಿದೆ ಎಂದು ಈ ಪ್ರಬಂಧ ಗುರುತಿಸಿದೆ.

೨. ಮುಸ್ಲಿಂ ಸ್ತ್ರೀಯರ ಸಾಂಸ್ಕೃತಿಕ ಮೌಲ್ಯಗಳು ಪುರುಷರಿಗೆ ಪೂರಕವಾಗಿವೆ.

೩. ಇಸ್ಲಾಂ ಸಮುದಾಯದಲ್ಲಿ ಪುರುಷರ ಆಳ್ವಿಕೆಯ ಭಾವನೆಯು ಹೆಣ್ಣನ್ನು ಹಿಂಸಿಸಿದ್ದರಿಂದ ಹೆಣ್ಣಿನ ಭಾವಲೋಕವು ಪುರುಷ ಭೀತಿಯಲ್ಲಿ ಅಂತರ್‌ಮುಖತ್ವವನ್ನು ರೂಢಿಸಿಕೊಳ್ಳಬೇಕಾಗಿದೆ. ಇದರಿಂದ ಮುಸ್ಲಿಂ ಮಹಿಳೆಯರಲ್ಲಿ ಮುಕ್ತ ಸ್ವಭಾವವೇ ಕುಂಟಿತವಾಗಿದೆ.

೪. ಸಾಂಪ್ರದಾಯಿಕವಾದ ಆಚರಣೆಗಳು, ಸಾಮಾಜಿಕ ನಿರ್ಬಂಧನೆಗಳು, ನಿಷೇಧಗಳ ವಿರುದ್ಧ ಧ್ವನಿ ಎತ್ತಿದರೆ, ಸಾರ್ವಜನಿಕವಾದ, ಅವಹೇಳನ, ನಿಂದನೆಯಿಂದ ಮುಸ್ಲಿಂ ಹೆಣ್ಣಿನ ಮನಸ್ಸು ದಾಸ್ಯ ಸ್ವಭಾವವನ್ನು ಅನುಸರಿಸಿದೆ. ಪುರುಷ, ಧರ್ಮದ ಪರಾಕ್ರಮಗಳಿಂದ ಜರ್ಜರಿತಗೊಂಡ ಸ್ತ್ರೀ ಮನಸ್ಸಿನಲ್ಲಿ ಸಾಮಾಜಿಕ ಭಯ ದಟ್ಟವಾಗಿ ನೆಲೆಗೊಂಡಿದೆ. ಹೀಗಾಗಿ ಮುಸ್ಲಿಂ ಮಹಿಳೆಯರು ಸಾರ್ವಜನಿಕವಾಗಿ ತನ್ನ ಅಸ್ತಿತ್ವವನ್ನು ಸ್ಥಾಪಿಸಲು ಸಾಧ್ಯವಾಗಿಲ್ಲ ಎಂದು ತಿಳಿದು ಬಂದಿದೆ.

೫. ಮುಸ್ಲಿಂ ಮಹಿಳೆಯರಿಗೆ ಕೀಳರಿಮೆಯನ್ನು ಪುರುಷ ಪ್ರಭುತ್ವವು ಸೃಷ್ಟಿಸಿದೆ. ಜೊತೆಗೆ ಆಕೆ ತನ್ನ ಸಾಮರ್ಥ್ಯವನ್ನೇ ಮರೆಯುವಂತೆ ಮಾಡಿದ್ದಲ್ಲದೇ, ಆಕೆಯೇ ತಾನು ದುರ್ಬಲಳು ಎಂದು ಘೋಷಿಸಿಕೊಳ್ಳುವಂತೆ ಮಾಡಿದೆ ಎಂದು ಅಕ್ಷರಸ್ಥ ಮಹಿಳೆಯರು ಹೇಳುತ್ತಾರೆ.

೬. ಮುಸ್ಲಿಂ ಮಹಿಳೆಯು ಸಾಮಾಜಿಕ ವ್ಯವಸ್ಥೆಯಲ್ಲಿ ಮುಖ್ಯ ಜವಾಬ್ದಾರಿಯನ್ನು ನಿರ್ವಹಿಸಲು ಅವಕಾಶವಿಲ್ಲದಂತಾಗಿದೆ.

೭. ಮುಸ್ಲಿಂ ಮಹಿಳೆ ಸಮಾಜದ ಕಣ್ಣಲ್ಲಿ ಕನಿಷ್ಠಳೆನಿಸಿ ಆಕೆ ಕುಟುಂಬ ಸೆರೆಯಲ್ಲಿ ಬಂಧಿಯಾಗುವಂತಾಗಿದೆ.

೮. ಮುಸ್ಲಿಂ ಮಹಿಳೆಯ ಮೌಖಿಕ ಪರಂಪರೆಯು ಸಮಾಜದಲ್ಲಿ ಮಹತ್ವ ಕಳೆದುಕೊಂಡಿದೆ.

೯. ಮುಸ್ಲಿಂ ಸಮಾಜದಲ್ಲಿ (ಕೌಟುಂಬಿಕ ವ್ಯವಸ್ಥೆಯಲ್ಲಿ) ಭೋಗ ಲಾಲಸ್ಯಗಳು ನಿಯಂತ್ರಣ ನೀಡಿ ಹೆಣ್ಣನ್ನು ಭೋಗದ ವಸ್ತುವಾಗಿಸಿಕೊಳ್ಳುವಂತಾಗಿದೆ.

ಹೀಗೆ ಅನೇಕ ಬಗೆಯ ಅಂಶಗಳನ್ನು ಈ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ. ಜೊತೆಗೆ ವಿಶೇಷವಾಗಿ ಮುಸ್ಲಿಂ ಪುರುಷ ಮನಸ್ಸನ್ನು ಅದರ ಪ್ರಭುತ್ವ ಸ್ವಭಾವವನ್ನು, ಧಾರ್ಮಿಕ ನಡತೆಯನ್ನು ವಿಶೇಷವಾಗಿ ಚರ್ಚಿಸಲಾಗಿದೆ. ಆದರೆ ಹೀಗೆ ಅಧೀನಳಾದ ಹೆಣ್ಣಿನ ಸ್ವಭಾವವನ್ನು ಪ್ರಧಾನವಾಗಿ ಚರ್ಚಿಸುವ ಜೊತೆ ಜೊತೆಗೆ ಕುಟುಂಬದಲ್ಲಿಆಕೆಯ ಸ್ಥಾನಮಾನ, ಶಿಕ್ಷಣವನ್ನು ಪಡೆಯುವಲ್ಲಿ ಆಕೆಗೆ ಇರುವ ಅಡೆ ತಡೆಗಳು, ವೈವಾಹಿಕ ಸಂಬಂಧವಾಗಿ ಮುಸ್ಲಿಂ ಮಹಿಳೆ ರೋಸಿ ಹೋಗಿರುವುದನ್ನು ಕಾಣಲಾಗಿದೆ. ಮುಸ್ಲಿಂ ಹೆಣ್ಣಿನ ದೇಹದ ಬಗ್ಗೆ ಯಾಕೆ ಪುರುಷ ಇಷ್ಟೊಂದು ಕವಚಗಳನ್ನು ನಿರ್ಮಿಸಿದ ಎಂಬುದು ಸಂಕೀರ್ಣವಾಗಿದೆ. ಎಂದು ಕ್ಷೇತ್ರಕಾರ್ಯದಿಂದ ತಿಳಿಯಲಾಗಿದೆ.

## ೫.೩. ಸಲಹೆಗಳು

ಯಾವ ಸಂಶೋಧನೆಯು ಪರಿಹಾರ ಸೂಚನೆಯಿಂದ ಮುಗಿದು ಹೋಗುವುದಿಲ್ಲ. ಆದೂಗ್ಯೂ ಹೆಣ್ಣಿನ ಮೇಲಿನ ಪುರುಷ, ಧರ್ಮಾಧಿಪತ್ಯದ ಶೋಷಣೆಯ ಹಿನ್ನಲೆಯಲ್ಲಿ ಕೆಲವು ಪರಿಹಾರಗಳನ್ನು, ಸಲಹೆಗಳನ್ನಾಗಿ ಮುಸ್ಲಿಂ ಮಹಿಳೆಯ ಸಾಮಾಜಿಕ ಬದುಕು ಎಂಬ ಅಧ್ಯಯನವನ್ನು ಕ್ಷೇತ್ರಕಾರ್ಯದ ಮೂಲಕ, ಸಂಶೋಧನೆ ನಡೆಸಿದಾಗ ನೇರವಾಗಿ ಸಂದರ್ಶಿತರಿಂದ ಪಡೆದ ಮಾಹಿತಿಗಳನ್ವಯ ನೀಡುವ ಪ್ರಯತ್ನ ಮಾಡಿದ್ದೇನೆ.

೧. ಲಿಂಗಧಾರಿತ ತಾರತಮ್ಯವನ್ನು ನಿವಾರಣೆ ಮಾಡಿ ಲಿಂಗ ಸಮಾನತೆಯನ್ನು ತರುವಲ್ಲಿ ಪ್ರತಿಯೊಬ್ಬರೂ ಆಸಕ್ತಿ ವಹಿಸಬೇಕು, ಅಂದಾಗ ಮಾತ್ರ ಮುಸ್ಲಿಂ ಮಹಿಳೆಯ ಬದುಕು ಸ್ವಲ್ಪ ಸುಧಾರಿಸಬಲ್ಲದು.

೨. ಮುಸ್ಲಿಂ ಹೆಣ್ಣು ಮಕ್ಕಳ ಸಾಮಾಜಿಕ ಸ್ವತಂತ್ರಗಳಿಗೆ ಇರುವ ಅಡ್ಡಿ ಆತಂಕಗಳನ್ನು ನಿವಾರಿಸುತ್ತಾ ಹೆಣ್ಣು ಮಕ್ಕಳ ಶಿಕ್ಷಣವನ್ನು ಪ್ರೋತ್ಸಾಹಿಸಬೇಕು.

೩. ಪುರುಷ ಪೂರ್ವಗ್ರಹಗಳು ಪುರುಷ ಪ್ರಯತ್ನದಿಂದಲೇ ನಾಶವಾಗಬೇಕಿದೆ.

೪. ಪುರುಷ ಸಮಾಜಕ್ಕೆ ಅಂತಃಕರಣದ ಆಧ್ಯಾತ್ಮವಿರಬೇಕು.

೫. ಆಳುವ, ಆಕ್ರಮಣ ಮಾಡುವ, ಅತಿಕ್ರಮಿಸುವ ಹಾಗೂ ಹೇರುವ, ಭೀತಿ ಹುಟ್ಟಿಸುವ ಪ್ರವೃತ್ತಿಗಳನ್ನು ಪುರುಷ ಸಮಾಜ, ಧಾರ್ಮಿಕ ವ್ಯವಸ್ಥೆ ರೂಪಾಂತರಿಸಿಕೊಂಡು, ಸಹಮಾನವತ್ವವನ್ನು ಅಂತರ್ಗತಿಸಿಕೊಳ್ಳಬೇಕು.

೬. ಪುರುಷ ರೂಢಿ ಮುಸ್ಲಿಂ ಧರ್ಮವು ಉದಾರಗೊಳ್ಳಬೇಕು, ಸ್ತ್ರೀಯರಿಗೆ ಮುಕ್ತ ಅವಕಾಶ ಕಲ್ಪಿಸಬೇಕು.

೭. ಮುಸ್ಲಿಂ ಮಹಿಳೆಯರಿಗೆ ಸಹಜವಾದ ಎಲ್ಲ ಹಕ್ಕು ಬಾಧ್ಯತೆಗಳನ್ನು ಹಿಂದಿರುಗಿಸಬೇಕು.

೮. ವಿವಾಹ ವ್ಯವಸ್ಥೆಯು ಪುರುಷ ಪಕ್ಷಪಾತಿಯಾಗಿರುವುದನ್ನು ತಪ್ಪಿಸಿ ವಿವಾಹ ಸಂಬಂಧಗಳು ಸಮಾನ ಅಧಿಕಾರ ಹೊಂದುವಂತಾಗಬೇಕು.

೯. ಬಹಳಷ್ಟು ಮುಸ್ಲಿಂ ಮಹಿಳೆಯರಿಗೆ ಕೇವಲ ಅನೌಪಚಾರಿಕ ಶಿಕ್ಷಣವನ್ನು ನೀಡಲಾಗುತ್ತದೆ. ಔಪಚಾರಿಕ ಶಿಕ್ಷಣವನ್ನು ಪಡೆಯುವಂತೆ ಮಾಡಿ, ತಾಂತ್ರಿಕವಾಗಿ ಶರವೇಗದಲ್ಲಿ ಮುನ್ನುಗ್ಗುತ್ತಿರುವ ಪ್ರಪಂಚಕ್ಕ ಕಾಲಿರಿಸಿ, ಸಮಾನ ಬದುಕನ್ನು ಆಸ್ವಾದಿಸುವಂತೆ ಮಾಡಲು ವ್ಯವಸ್ಥೆಗಳು, ಮೂಲಭೂತವಾದಿಗಳು ತಮ್ಮ ನಿಲುವನ್ನು ಬದಲಿಸಿಕೊಳ್ಳಬೇಕು.

೧೦. ಪ್ರತಿಯೊಂದು ಮುಸ್ಲಿಂ ಕುಟುಂಬದಲ್ಲಿ ಮಹಿಳೆಗೆ ಸರಿಸಮಾನವಾದ ಶಿಕ್ಷಣ, ಸ್ವಾತಂತ್ರ್ಯ, ಸೌಕರ್ಯ, ಸಂಪ್ರದಾಯಗಳಿಂದ ಮುಕ್ತಿ ಕೊಡಿಸುವ ಬಗ್ಗೆ ತಿಳುವಳಿಕೆ ಮೂಡಿಸಬೇಕು.

೧೧. ಮುಸ್ಲಿಂ ಮಹಿಳೆಗೆ ಆರ್ಥಿಕವಾದ ಬಲಗಳನ್ನು ಒದಗಿಸಬೇಕು, ಹಾಗೂ ಉತ್ಪದನಾ ವ್ಯವಸ್ಥೆಯ ಒಡೆತನದ ಅಧಿಕಾರವನ್ನು ಸ್ತ್ರೀ ಸಮುದಾಯಕ್ಕೆ ಸಮನಾಗಿ ಹಂಚಬೇಕು.

ಒಟ್ಟಿನಲ್ಲಿ ಸೃಷ್ಠಿ ನಿಯಮದಲ್ಲಿ ಯಾರೂ ಮೇಲಲ್ಲ, ಕೀಳಲ್ಲ, ಎಲ್ಲರೂ ಅವರವರ ಅವಕಾಶ ಮತ್ತು ಬದುಕುಳಿಯುವ ಅಸ್ತಿತ್ವದಲ್ಲಿ, ಆಯ್ಕೆಯಲ್ಲಿ ಸ್ವಾತಂತ್ರ್ಯವಾಗಿರಬೇಕು. ಅದನ್ನೇ ಗೌತಮ ಬುದ್ಧ ಪ್ರತಿಪಾದಿಸಿದ್ದು,

ಅಂತಹ ಪಯಣದಲ್ಲಿ ಮಾತ್ರ ಲಿಂಗ ಸಂಬಂಧಗಳು ಉನ್ನತ ನೆಲೆಯನ್ನು ತಲುಪಬಲ್ಲವು ಪುರುಷ ಮತ್ತು ಮಹಿಳೆಯ ವಿರುದ್ಧ ಚಲನೆ ನಿಜವಾದ ಚಲನೆಯೂ ಅಲ್ಲ. ಪ್ರಗತಿಯಂತು ಅಲ್ಲವೇ ಅಲ್ಲ. ಅದು ವಿಕಾಸದ ಕ್ರಮವನ್ನು ನಿರಾಕರಿಸುವಂತದು. ಅದು ಹಿನ್ನೆಡೆಯೆ ವಿನಹಃ ಮುನ್ನಡೆ ಅಲ್ಲ, ಬುದ್ಧ ನಿಜವಾದ ಮಾನವೀಯ ಸಂಬಂಧಗಳು ವಿಕಾಸವನ್ನು ಪ್ರತಿಪಾದಿಸಿದ್ದನ್ನು ಗಮನಿಸಬೇಕು, ಆಕರ್ಷಣೆ ವಿಕರ್ಷಣೆಗಳೆರಡೂ ಹೆಣ್ಣು ಗಂಡಿನ ಜೈವಿಕ ಸ್ವಭಾವ ಹಾಗೆಯೇ ಸಂಸ್ಕೃತಿ ಮತ್ತು ಧರ್ಮ ಕೂಡ ಸ್ತ್ರೀ ಪುರುಷರಿಬ್ಬರ ಮಧ್ಯೆ ಅನೇಕ ಅಪಕಲ್ಪನೆಗಳನ್ನು ಬೆಳೆಸಿವೆ. ಇವನ್ನೆಲ್ಲ ಈ ಕಾಲದಲ್ಲಿ ಮೀರಲು ಸಾಧ್ಯ. ಅಂತಹ ಸಾಧ್ಯತೆಯ ಅಧ್ಯಯನಗಳ ಕಡೆಗೆ ನಾವಿನ್ನು ಮುಂದಾಗಬೇಕಾಗಿದೆ.

ಮುಸ್ಲಿಂ ಸ್ತ್ರೀ ಸಮುದಾಯ ಶೈಕ್ಷಣಿಕವಾಗಿ ಬಲಗೊಂಡು ಆಕೆಗೆ ಆತ್ಮವಿಶ್ವಾಸ ಎಂದು ಪುರುಷ ಕೃಪೆ ಇಲ್ಲದೆ ಬದುಕುವಂತಾಗುತ್ತದೆ. ಶಿಕ್ಷಣ ಉದ್ಯೋಗ, ಸ್ವಯಂ ವಿವೇಚನೆ, ರಕ್ಷಣೆಗಳು ಸೂಕ್ತವಾಗಿ ಪಡೆಯುವಂತಾದರೆ, ಇಂತಹ ಸಾಮಾಜಿಕ ಪಿಡುಗಿನ ನಿಷೇಧಗಳು ನಾಶವಾಗಬಲ್ಲವು. ಪುರುಷ ಪ್ರಕೃತಿ, ಸ್ತ್ರೀ ಪ್ರಕೃತಿ ಬೇರೆ ಬೇರೆ ಅಲ್ಲ. ಅವೆರಡೂ ಜೀವ ವಿಕಾಸದ ಜೋಡಿ ಸಾವಯವ ರಚನೆಯಂತಿವೆ. ಅಂತಹ ಜೀವ ಪ್ರೀತಿಯ ಸಾಧ್ಯತೆಯನ್ನು ಸಂಯೋಜಿಸುವ ಮೂಲಕ ಉಂಟಾಗಿರುವ ಲಿಂಗ ಭೇದದ ಅಂತರವನ್ನು ನಿವಾರಿಸಬಹುದು.

ನನ್ನ ಅಧ್ಯಯನಕ್ಕೆ ಪೂರಕವಾಗಿ ಮಾಹಿತಿಯನ್ನು ಒದಗಿಸಲು ಕೈಗೊಂಡ ಕ್ಷೇತ್ರಕಾರ್ಯದಲ್ಲಿ ಪ್ರತಿಕ್ರಿಯಿಸಿದ ನನ್ನ ಸಮಾನ ವಯಸ್ಕ ಸ್ನೇಹಿತೆಯರ ಪ್ರಕಾರ ಹೇಳುವಂತೆ ಇಂದು ಕಾಲ ಬದಲಾದಂತೆ, ಮಹಿಳೆಯರ ಸ್ಥಿತಿ ಗತಿ, ಸ್ಥಾನ ಮಾನಗಳು ತಕ್ಕ ಮಟ್ಟಿಗಾದರೂ ಬದಲಾಗಿವೆ. ಬದಲಾಗುತ್ತವೆ. ಇವತ್ತಿನ ಆಧುನಿಕ ಮಹಿಳೆ ಹಿಂದಿನಂತೆ ನಾಲ್ಕು ಗೋಡೆಗಳ ಮಧ್ಯೆ ಬಂಧಿತಳಾಗಬೇಕಿಲ್ಲ. ವಿದ್ಯಾವಂತಳಾಗಿ ಪುರುಷನಿಗೆ ಸರಿಸಮಾನಾಗಿ ಎಲ್ಲ ಕ್ಷೇತ್ರಗಳಲ್ಲಿಯೂ ದುಡಿಯುತ್ತಿದ್ದಾಳೆ. ಇಂದು ಹೆಣ್ಣು ಗಂಡನ ದಾಸಿಯಲ್ಲಿ, ಪತಿಯನ್ನು ದೇವರೆಂದು ಪೂಜಿಸಬೇಕಿಲ್ಲ. ಸ್ತ್ರೀ ಪುರುಷರಲ್ಲಿ ಯಾರೂ ಹೆಚ್ಚಲ್ಲ. ಯಾರೂ ಕಡಿಮೆಯೇನಲ್ಲ, ಅದಕ್ಕಾಗಿ ಪೈಪೋಟಿ ನಡೆಸುವುದೂ ಸರಿಯಲ್ಲ, ಯಾರೂ ಯಾರನ್ನೂ ಶೋಷಿಸದೆ, ಪರಸ್ಪರ ಪ್ರೀತಿ ವಿಶ್ವಾಸ, ಆತ್ಮೀಯತೆಯ ಹೊಂದಾಣಿಕೆಯಿಂದ ಒಬ್ಬರನ್ನೊಬ್ಬರು ಗೌರವಿಸುತ್ತಾ, ಪ್ರೋತ್ಸಾಹಿಸುತ್ತಾ, ದೋಷಗಳನ್ನು ಕಳೆದುಕೊಂಡು ವ್ಯಕ್ತಿತ್ವ ಬೆಳೆಸಿಕೊಳ್ಳುವಲ್ಲಿ ಸಾರ್ಥಕತೆಯಿದೆ.

ಇತ್ತೀಚಿತ್ತಲಾಗಿ ವಿದ್ಯಾವಂತರ ಸಂಖ್ಯೆ ಹೆಚ್ಚುತ್ತಿರುವುದರಿಂದ ಮೂಢ ನಂಬಿಕೆಗಳೂ ಕಡಿಮೆಯಾಗುತ್ತಿವೆ. ಆದರೂ ಸಂಪೂರ್ಣವಾಗಿ ತೊಲಗಬೇಕಾದರೆ, ಇನ್ನೂ ಸ್ವಲ್ಪ ಕಾಲಾವಕಾಶ ಬೇಕಾಗಬಹುದು. ಪ್ರತಿಯೊಬ್ಬ ಮುಸ್ಲಿಂ ಮಹಿಳೆಯರು ವಿದ್ಯಾವಂತರಾಗಿ ತಿಳುವಳಿಕೆ ಪಡೆದಾಗ ಮಾತ್ರ ಅರ್ಥವಿಲ್ಲದ ಅಂಧಾನುಕರಣೆಗಳಿಗೆ ಸಂಪೂರ್ಣ ವಿದಾಯ ಹೇಳಲು ಸಾಧ್ಯ.

ಮಹಿಳೆಯರಿಗೆ ಶಿಕ್ಷಣ ದೊರೆತಲ್ಲಿ ಅವಳು ಆತ್ಮವಿಶ್ವಾಸದಿಂದ ಬದುಕುಬಲ್ಲಳು ಎನ್ನುವುದನ್ನು ಸಾಬೀತು ಪಡಿಸುತ್ತದೆ. ಅನಕ್ಷರಸ್ಥ ಮಹಿಳೆಯೂ ಸಂಕಷ್ಟ ಸನ್ನಿವೇಶಗಳಲ್ಲಿ, ವಿಧವೆಯಾದಾಗಲೋ, ಗಂಡ ದೇಶಾಂತರ ಹೋದಾಗಲೋ, ಮಕ್ಕಳನ್ನು ಬೆಳೆಸುವ ಜವಾಬ್ದಾರಿಯನ್ನು ಸಮರ್ಥವಾಗಿ ನಿರ್ವಹಿಸುತ್ತಲೇ ಬಂದಿರುವ ವಕ್ಯ

ಮೆಹರುನ್ನಿಸಾಗೆ ಆದಾಗ್ಯೂ ಸುತ್ತಲಿನ ಸಮಾಜದ ಬಗೆಗಿನ ಅಂಜಿಕೆಯನ್ನು ಮೆಟ್ಟಿ ನಿಲ್ಲಲು ಇಂಥ ಮಹಿಳೆಗೆ ಸಾಧ್ಯವಾಗುತ್ತಿಲ್ಲ.

''ಹೀಗೆ ಸಮಾಜದಲ್ಲಿ ಮುಸ್ಲಿಂ ಮಹಿಳೆಯರಲ್ಲಿ ತಣ್ಣಗೆ ಆಗುತ್ತಿರುವ ಬದಲಾವಣೆಗಳಿವೆ. ರಾಷ್ಟ್ರೀಯ, ಅಂತರಾಷ್ಟ್ರೀಯ ನೆಲೆಯಲ್ಲಿ ಪ್ರತಿಷ್ಠಾಪಿತವಾಗುತ್ತಿರುವ ಮಹಿಳಾ ಹಕ್ಕಾಗಿದೆ. ಸಮುದಾಯಗಳಿವೆ ಒಳಗಿನ ಶೋಷಣೆಯ ವಿರುದ್ಧ ಧ್ವನಿಯೆತ್ತಬೇಕು. ಹೊರಗಿನ ಸಮಾಜ, ಸಂಪ್ರದಾಯ, ಧರ್ಮಿಕ ವ್ಯವಸ್ಥೆಯ ವಿರುದ್ಧ ಹೋರಾಟ ನಡೆಸಬೇಕು.''[೨]

ಭಾರತೀಯ ಮುಸ್ಲಿಂ ಮಹಿಳೆಯರು ಗುರುತರ ಶಕ್ತಿ ಕೇಂದ್ರಗಳನ್ನು ನಿರ್ವಹಿಸುತ್ತಾ ತಮ್ಮ ಕಾರ್ಯಕ್ಷೇತ್ರವನ್ನು ವಿಸ್ತರಿಸಿಕೊಳ್ಳುತ್ತಿದ್ದಾರೆ. ಅಂಗನವಾಡಿ ಕಾರ್ಯಕರ್ತೆಯರಾಗಿ, ಶಿಕ್ಷಕಿಯರಾಗಿ, ಸ್ವಸಹಾಯ ಗುಂಪಿನ ಸದಸ್ಯೆಯಾಗಿ, ನಗರಸಭೆ, ಗ್ರಾಮ ಪಂಚಾಯ್ತಿಯಿಂದ ಜಿಲ್ಲಾ ಪಂಚಾಯ್ತಿ ಯವರೆಗೆ ಅನೇಕ ಹುದ್ದೆಗಳನ್ನು ವಹಿಸಿಕೊಂಡಿದ್ದಾರೆ. ಆಂಧ್ರದ ಫಾತಿಮಾ ಬಿ.ವಿ. ಗ್ರಾಮ ಪಂಚಾಯ್ತಿ ಅಧ್ಯಕ್ಷೆಯಾಗಿ ಸಾಧಿಸಿದ ವಿಶ್ವಮಟ್ಟದಲ್ಲಿ ಗುರ್ತಿಸಲಾಗಿದೆ.

ಈಗ ಮುಸ್ಲಿಂ ಮಹಿಳೆ ಖುರಾನ್ ತನಗೆ ಕೊಡಮಾಡಿರುವ ಹಕ್ಕು, ಬಾಧ್ಯತೆಗಳಿಗೆ ಸರಿಯಾದ ವ್ಯಾಖ್ಯಾನ ಅರ್ಥ ವಿವರಣೆ ಬಯಸಿದ್ದಾಳೆ. ಎಂದು ಹೇಳಬಹುದು. ಆಸ್ತಿಯ ಪಾಲು ಕೇಳುತ್ತಿದಾಳೆ. ಖುರಾನ್ ಎಂದೂ ಸ್ತ್ರೀ ವಿರೋಧಿಯಲ್ಲ, ಪುರುಷ ಲೋಕ ತನ್ನ ಮೂಗಿನ ನೇರಕ್ಕೆ ಮಾಡಿಕೊಂಡಿರುವ ಬಹುಪತ್ನಿತ್ವ, ತಲ್ಲಾಖ್‌ಗಳನ್ನೂ ಪ್ರಶ್ನಿಸಬೇಕಾಗಿದೆ ಮತ್ತು ಜೀವನಾಂಶಗಳ ಕುರಿತು ಹೋರಾಟಕ್ಕಿಳಿಯಬೇಕು. ನಿರ್ವಹಣಾ ವೆಚ್ಚ ವಿಚ್ಛೇದಿತ ಪತಿಯಿಂದ ಕೇಳಬೇಕು. ಮನ ಬಂದಂತೆ ವರ್ತಿಸುವ ಮುಲ್ಲಾಗಳಿಗೆ ಕಡಿವಾಣ ಹಾಕುವಂತಾಗಬೇಕು ತಣ್ಣನೆಯ ಬದಲಾವಣೆ ಗಾಳಿಯನ್ನು ಬಯಸಿದಾಗ ಮಾತ್ರ ಮುಸ್ಲಿಂ ಮಹಿಳೆಯರು ಪ್ರತಿ ಬಂಧನದಿಂದ ಮುಕ್ತರಾಗಲು ಸಾಧ್ಯವಿದೆ.[೩]

ಎಲ್ಲಕ್ಕಿಂತ ಮುಖ್ಯವಾಗಿ ಮುಸ್ಲಿಂ ಸ್ತ್ರೀಯರಲ್ಲಿ ಸ್ವಾಭಿಮಾನ, ಆತ್ಮವಿಶ್ವಾಸಗಳು, ಹೆಚ್ಚಬೇಕಾಗಿದೆ. ಸ್ತ್ರೀಯರ ಶಕ್ತಿಯ ಗರಿಷ್ಠ ಬೆಳವಣಿಗೆ, ಪ್ರಯೋಜನ ಅವರಿಗೆ ಮತ್ತು ಸಮಾಜಕ್ಕೆ ರಚನಾತ್ಮಕವಾಗಿ ಆಗಬೇಕಾಗಿದೆ. ವಿಭಿನ್ನ ವೃತ್ತಿಗಳಲ್ಲಿ, ಬೌದ್ಧಿಕ ಉತ್ತರ, ತಜ್ಞತೆಗಳಲ್ಲಿ ಮಹಿಳೆಯರ ತಮ್ಮ ಶಕ್ತಿಯನ್ನು ಸಾಬೀತುಗೊಳಿಸಬೇಕಾಗಿದೆ. ಮದುವೆಯೆಂಬುದು ಮಹಿಳೆಯರ ಪ್ರತಿಭೆಯನ್ನು ಆಹುತಿ ತೆಗೆದುಕೊಳ್ಳುವ ಅಗ್ನಿಯಾಗಬಾರದು. ಕುಟುಂಬವು ಅವಳ ತ್ಯಾಗ, ತಾಳ್ಮೆ, ಸಮಅರ್ಪಣಾ ಮನೋಭಾವನೆಯನ್ನು ಮಾತ್ರ ಕೇಳುತ್ತಾ ಅವಳನ್ನು ತುಳಿಯುವ ರಚನೆಯಾಗಲಾರದು. ಮಹಿಳೆಯರ ಆಧ್ಯತೆಗಳು ಬದಲಾಗಬೇಕು. ಸಮಾಜದಲ್ಲಿ ಯಾರೂ ಹುತಾತ್ಮತೆಯನ್ನು ತಮ್ಮ ಮೇಲೆ ಹೇರಿಕೊಳ್ಳಬಾರದು, ಹುತಾತ್ಮತೆಯನ್ನು ಆರೋಗ್ಯಕರ ಸಮಾಜ ಬಯಸಬಾರದು. ಮರೆಯಲೇಬಾರದ ವಿಷಯವೆಂದರೆ, ಪುರುಷ ಪಕ್ಷಪಾತದ ನಿರ್ಮೂಲನಕ್ಕಾಗಿ ಹೋರಾಡುವವರು ಸ್ತ್ರೀ ಪಕ್ಷಪಾತವನ್ನು ಕಟ್ಟಬಾರದು. ತಕ್ಕಡಿಯನ್ನು ಕಡೆಯಿಂದ ಇನ್ನೊಂದು ಕಡೆಗೆ ವಾಲಿಸುವುದಲ್ಲ, ಅದನ್ನು ಸಮಸ್ಥಿತಿಯಲ್ಲಿರುವುದು ಉದ್ದೇಶ.[೪]

ಕೊನೆಯದಾಗಿ ಮಹಿಳೆ ಎಷ್ಟೇ ಮುಂದುವರೆದರೂ, ಅವಳು ಭಾರತೀಯಳಾಗಿ ಉಳಿದು ಬೆಳೆದು, ದೇಶದ ಸಂಸ್ಕೃತಿಯನ್ನು ಕಾಪಾಡಬೇಕು. ಉತ್ತಮವೂ, ಉನ್ನತವೂ ಆದ ಧರ್ಮ ಪರಂಪರೆಯುಳ್ಳ ಭಾರತ, ಇಡೀ ವಿಶ್ವ ಗುರುಸ್ಥಾನದಲ್ಲಿದೆ. ಇಂಥ ಶ್ರೇಷ್ಠ ಸಂಸ್ಕೃತಿಯನ್ನು ಮಹಿಳೆ ಹಿಂದಿನಿಂದಲೂ ಉಳಿಸಿಕೊಂಡು ಬಂದಂತೆ, ಮುಂದೆಯೂ ಬೆಳೆಸಿಕೊಂಡು ಹೋಗುವ, ಹಿರಿತನದ ಹೊಣೆಗಾರಿಕೆ ಭಾರತೀಯ ಮಹಿಳೆಯರದ್ದಾಗಿದೆ.

**ಟಿಪ್ಪಣಿಗಳು**

೧. ಸುನಂದ ಎಂ, ನಿಷೇಧಗಳು ಮತ್ತು ಲಿಂಗ ವ್ಯವಸ್ಥೆ, ಅಪ್ರಕಟಿತ ಸಂ ಪ್ರಬಂಧ, ಜನಪದ ಅಧ್ಯಯನ ವಿಭಾಗ, ೨೦೦೫, ಪು.ಸಂ.೧೬

೨. ಕೆ. ಶರೀಫಾ, ಬಂಡಾಯ ಮುಸ್ಲಿಂ ಸಂವೇಧನೆ, ಸಿ.ವಿ.ಜಿ. ಪ್ರಕಾಶನ, ೨೦೦೪, ಪು.ಸಂ. ೭೭.

೩. ಕೆ. ಶರೀಫಾ, ಬಂಡಾಯ ಮುಸ್ಲಿಂ ಸಂವೇಧನೆ, ಸಿ.ವಿ.ಜಿ. ಪ್ರಕಾಶನ, ೨೦೦೪, ಪು.ಸಂ. ೭೭.

೪. ವಿಜಯಾ ದಬ್ಬೆ, ನಾರಿ: ದಾರಿ-ದಿಗಂತ, ರಚನಾ ಪ್ರಕಾಶನ, ಮೈಸೂರು, ಪು.ಸಂ.೨೯

* * *

# ಅನುಬಂಧಗಳು

೧. ವಕ್ತೃಗಳ ಪಟ್ಟಿ

೨. ಪ್ರಶ್ನಾವಳಿ ಮಾದರಿ

೩. ಗ್ರಂಥಋಣ

೪. ಛಾಯಾಚಿತ್ರಗಳು

## ೧. ವಕ್ತೃಗಳ ಪಟ್ಟಿ

| ಕ್ರ.ಸಂ. | ಹೆಸರು | ಲಿಂಗ | ಶಿಕ್ಷಣ | ಸ್ಥಳ |
|---|---|---|---|---|
| ೧. | ಖಾಜಾ ಹುಸೇನ್ | ಗಂಡು | - | ಚಪ್ಪರದಳ್ಳಿ, ಹೊಸಪೇಟೆ |
| ೨. | ರಾಜ ಸಾಹೇಬ | ಗಂಡು | - | ಚಪ್ಪರದಳ್ಳಿ, ಹೊಸಪೇಟೆ |
| ೩. | ಬಾನು ಬೇಗಂ | ಹೆಣ್ಣು | - | ಚಪ್ಪರದಳ್ಳಿ, ಹೊಸಪೇಟೆ |
| ೪. | ಖಾಜಾ ಹುಸೇನ್ | ಗಂಡು | - | ಚಪ್ಪರದಳ್ಳಿ, ಹೊಸಪೇಟೆ |
| ೫. | ಫಾತಿಮಾ | ಹೆಣ್ಣು | - | ಎಸ್.ಆರ್.ನಗರ, ಹೊಸಪೇಟೆ |
| ೬. | ಹುಸೇನ್ ಬಾಷಾ | ಗಂಡು | ೬ ನೇ ತರಗತಿ | ಎಸ್.ಆರ್.ನಗರ, ಹೊಸಪೇಟೆ |
| ೭. | ಮುಸ್ತಫಾ | ಗಂಡು | ೯ ನೇ ತರಗತಿ | ಎಸ್.ಆರ್.ನಗರ, ಹೊಸಪೇಟೆ |
| ೮. | ಫಕ್ರುದ್ದೀನ್ | ಗಂಡು | ಪಿಯುಸಿ | ಎಸ್.ಆರ್.ನಗರ, ಹೊಸಪೇಟೆ |
| ೯. | ಚಾಂದಾ ಪಾಷ | ಗಂಡು | - | ಎಸ್.ಆರ್.ನಗರ, ಹೊಸಪೇಟೆ |
| ೧೦. | ಹೀನಾ | ಹೆಣ್ಣು | - | ಎಸ್.ಆರ್.ನಗರ, ಹೊಸಪೇಟೆ |
| ೧೧. | ಮಹ್ಮದ್ ರಫಿ | ಗಂಡು | ಬಿ.ಎ | ಎಸ್.ಆರ್.ನಗರ, ಹೊಸಪೇಟೆ |
| ೧೨. | ಮೈಮುನ | ಹೆಣ್ಣು | ೯ ನೇ ತರಗತಿ | ಎಸ್.ಆರ್.ನಗರ, ಹೊಸಪೇಟೆ |
| ೧೩. | ಮಾಲನ | ಹೆಣ್ಣು | - | ಎಸ್.ಆರ್.ನಗರ, ಹೊಸಪೇಟೆ |
| ೧೪. | ಹಾಜರಾಬಿ | ಹೆಣ್ಣು | - | ಎಸ್.ಆರ್.ನಗರ, ಹೊಸಪೇಟೆ |
| ೧೫. | ನೂರಮಹ್ಮದ್ | ಗಂಡು | ಬಿ.ಎ | ಎಸ್.ಆರ್.ನಗರ, ಹೊಸಪೇಟೆ |

| | | | | |
|---|---|---|---|---|
| ೧೬. | ಖಾದರ್ ಬಾಷ | ಗಂಡು | ಬಿ.ಎಸ್.ಸಿ | ಎಸ್.ಆರ್.ನಗರ, ಹೊಸಪೇಟೆ |
| ೧೭. | ಎಚ್.ಎನ್.ಕ್ಯೂ | ಗಂಡು | ಬಿ.ಎ | ಬಸವೇಶ್ವರ ನಗರ, ಹೊಸಪೇಟೆ |
| ೧೮. | ಹಾಜರಾಬಿ | ಹೆಣ್ಣು | ಶಿಕ್ಷಕಿ | ಡ್ಯಾಂ ರಸ್ತೆ, ಹೊಸಪೇಟೆ |
| ೧೯. | ಆಫ್ರಿನ್ | ಹೆಣ್ಣು | ಪಿಯುಸಿ | ಡ್ಯಾಂ ರಸ್ತೆ, ಹೊಸಪೇಟೆ |
| ೨೦. | ಸದ್ದಾಂ ಹುಸೇನ್ | ಗಂಡು | - | ಬಸವೇಶ್ವರ ನಗರ, ಹೊಸಪೇಟೆ |
| ೨೧. | ಮೆಹರಾಜ ಪಾಷ | ಗಂಡು | - | ಬಸವೇಶ್ವರ ನಗರ, ಹೊಸಪೇಟೆ |
| ೨೨. | ರೇಷ್ಮಾ | ಹೆಣ್ಣು | ೯ ನೇ ತರಗತಿ | ಬಸವೇಶ್ವರ ನಗರ, ಹೊಸಪೇಟೆ |
| ೨೩. | ಬೀಬಿ | ಹೆಣ್ಣು | - | ಹೂವಿನ ಹಡಗಲಿ |
| ೨೪. | ರೆಹಮಾನ್ | ಗಂಡು | ಬಿ.ಎ | ಮಾಲವಿ, ಹಗರಿಬೊಮ್ಮನಹಳ್ಳಿ |
| ೨೫. | ಸಾಹೇರ್ | ಗಂಡು | - | ನೂರಾನಿ ಮಸೀದಿ, ಹೊಸಪೇಟೆ |
| ೨೬. | ಹಾಜ್ರ | ಹೆಣ್ಣು | - | ಡ್ಯಾಂ ರಸ್ತೆ, ಹೊಸಪೇಟೆ |
| ೨೭. | ಗೌಸಿಯಾ | ಹೆಣ್ಣು | ಬಿ.ಎ | ಡ್ಯಾಂ ರಸ್ತೆ, ಹೊಸಪೇಟೆ |
| ೨೮. | ಆಶಾ | ಹೆಣ್ಣು | ಎಸ್‌ಎಸ್‌ಎಲ್‌ಸಿ | ಅಮರಾವತಿ, ಹೊಸಪೇಟೆ |
| ೨೯. | ನೂರಜಹಾನ್ | ಹೆಣ್ಣು | - | ಅಮರಾವತಿ, ಹೊಸಪೇಟೆ |
| ೩೦. | ಹಸಿನಾ | ಹೆಣ್ಣು | ಪಿ.ಪಿ.ಸಿ | ಅಮರಾವತಿ, ಹೊಸಪೇಟೆ |
| ೩೧. | ಹುಸೇನ್ | ಗಂಡು | - | ಜಯನಗರ, ಗಂಗಾವತಿ |
| ೩೨. | ಗುಲ್ಜಾರ್ | ಹೆಣ್ಣು | ೬ ನೇ ತರಗತಿ | ಹೂವಿನಹಡಗಲಿ |
| ೩೩. | ಕೌಸರ್ | ಹೆಣ್ಣು | ೭ ನೇ ತರಗತಿ | ಹಗರಿಬೊಮ್ಮನಹಳ್ಳಿ |
| ೩೪. | ಯಾಸ್ಮಿನ್ | ಹೆಣ್ಣು | ೭ ನೇ ತರಗತಿ | ಹಗರಿಬೊಮ್ಮನಹಳ್ಳಿ |
| ೩೫. | ಉಮರ್‌ಖಾನ್ | ಗಂಡು | ಬಿ.ಕಾಂ | ಎಸ್.ಆರ್.ನಗರ, ಹೊಸಪೇಟೆ |
| ೩೬. | ಮೆಹರುನ್ನಿಸಾ | ಹೆಣ್ಣು | ಟಿ.ಸಿ.ಎಚ್ | ಅಮರಾವತಿ, ಹೊಸಪೇಟೆ |

* * *

## ೨. ಪ್ರಶ್ನಾವಳಿಯ ಮಾದರಿ

೧. ಹೆಸರು :

೨. ವಯಸ್ಸು :

೩. ಜಾತಿ, ಧರ್ಮ :

೪. ಭಾಷೆ :

೫. ಕುಟುಂಬದ ವಿವರ :

೧. ಅವಿಭಕ್ತ ೨. ವಿಭಕ್ತ

೬. ಮಹಿಳೆಯರ ವೈವಾಹಿಕ ಸ್ಥಾನಮಾನ

೧. ವಿವಾಹಿತ ೨. ಅವಿವಾಹಿತ ೩. ವಿಚ್ಛೇದಿತ ೪. ವಿಧವೆ

೭. ಕುಟುಂಬದ ವಾರ್ಷಿಕ ಆದಯ

೮. ಶಿಕ್ಷಣ

೧. ಅಕ್ಷರಸ್ಥರು ೨. ಅನಕ್ಷರಸ್ಥರು

೩. ಪ್ರಾಥಮಿಕ ಶಿಕ್ಷಣ ೪. ಮಾಧ್ಯಮಿಕ ಶಿಕ್ಷಣ

೫. ಪ್ರೌಢ ಶಿಕ್ಷಣ

೯. ನಿಮ್ಮ ಮಕ್ಕಳು ಶಾಲೆಗೆ ಹೋಗುತ್ತಿರುವರೇ ಹೌದು/ ಇಲ್ಲ

೧೦. ಇಲ್ಲದಿದ್ದರೆ ಏಕೆ ಕಳುಹಿಸಲಿಲ್ಲ ಹೌದು/ಇಲ್ಲ

೧೧. ಹೆಣ್ಣು ಮಕ್ಕಳನ್ನು ಗಂಡು ಮಕ್ಕಳಂತೆ ಓದಿಸುವಿರಾ ಹೌದು/ಇಲ್ಲ

೧೨. ಒಟ್ಟಾರೆಯಾಗಿ ಶಿಕ್ಷಣದ ಬಗ್ಗೆ ನಿಮ್ಮ ಅಭಿಪ್ರಾಯವೇನು ?

೧೩. ಆರ್ಥಿಕ ಸ್ಥಿತಿ ?

೧೪. ಯಾವ ಉದ್ಯೋಗದಲ್ಲಿ ತೊಡಗಿಸಿಕೊಂಡಿರುವಿರಿ ?

೧. ಗಾರೆ ಕೆಲಸ ೨. ಕೃಷಿ ೩. ಮನೆಗೆಲಸ ೪. ಬೀಡಿ ಕಟ್ಟುವುದು ೫. ಇತರೆ

೧೫. ವರ್ಷದಲ್ಲಿ ಕೆಲಸವಿರುವ ದಿನಗಳು

೧. ೯೦ ದಿನಗಳು ೨. ೧೮೦ ದಿನಗಳು ೩. ೨೪೦ ದಿನಗಳು ೪. ವರ್ಷಪೂರ್ತಿ

೧೬. ಕೂಲಿ ಹಣವನ್ನು ಖರ್ಚು ಮಾಡುವ ಬಗೆ

೧. ಸ್ವಂತಕ್ಕಾಗಿ ೨. ಮನೆಗಾಗಿ ೩. ಮಕ್ಕಳ ವಿದ್ಯಾಭ್ಯಾಸಕ್ಕಾಗಿ ೪. ಇತರ ಕೆಲಸಗಳಿಗಾಗಿ

೧೭. ತಿಂಗಳ ಆದಾಯ

೧. ೫೦೦ ಕ್ಕಿಂತ ಕಡಿಮೆ ೨. ೫೦೦-೬೦೦ ೩. ೬೦೦-೮೦೦ ೪. ೧೦೦೦ ಕ್ಕಿಂತ ಹೆಚ್ಚು

೧೮. ಬಿಡುವಿನ ವೇಳೆಯಲ್ಲಿ ನಿರ್ವಹಿಸುವ ಕೆಲಸಗಳು

೧. ಮನೆಗೆಲಸ ೨. ಹೈನುಗಾರಿಕೆ ೩. ಬೀಡಿ ಕಟ್ಟುವುದು ೪. ಹೂ ಕಟ್ಟುವುದು

೧೯. ಹೊಂದಿರುವ ಸ್ವತ್ತುಗಳು

೧. ಹಸು ೨. ಎಮ್ಮೆ ೩. ಕುರಿ ೪. ಕೋಳಿ ೫. ಮೋಟಾರು ಬಂಡಿ, ಸೈಕಲ್

೨೦. ವಸತಿಯ ಸೌಕರ್ಯ

೧. ವಾಸಿಸುವ ಮನೆ: ೨. ಸ್ವಂತ ೩. ಬಾಡಿಗೆ ೪. ಭೂಮಾಲಿಕನ ಮನೆ

೨೧. ಮನೆಯ ನಮೂನೆ

೧. ಗುಡಿಸಲು ೨. ಹಂಚುಗಳನ್ನು ಹಾಕಿರುವುದು ೩. ಸರ್ಕಾರದವರು ಹಾಕಿ ಕೊಟ್ಟಂತಹ ಮನೆ

೪. ಮಣ್ಣು ಗೋಡೆ

**ಮೌಲ್ವಿಗಳನ್ನು ಕುರಿತು**

(ಸ್ತ್ರೀ ಸಂಪ್ರದಾಯಗಳ ಬಗ್ಗೆ, ರೀತಿ ರಿವಾಜುಗಳ ಬಗ್ಗೆ ಕೇಳುವುದು)

೧. ಧಾರ್ಮಿಕ ಸ್ಥಳಗಳಲ್ಲಿ ಮಹಿಳೆಯರಿಗೆ ಏಕೆ ನಿಷೇಧಗಳು?

೨. ಪರ್ದಾ ಕಡ್ಡಾಯವೇ?

೩. ಮುಸ್ಲಿಂ ಮಹಿಳೆಗೆ ಔಪಚಾರಿಕ ಶಿಕ್ಷಣ ಅಗತ್ಯ ಇಲ್ಲವೇ? ಇಲ್ಲವಾದರೆ, ಏಕಿಲ್ಲ?

೪. ವೈವಾಹಿಕ ನಿಯಮಗಳೇನು?

೫. ಲಿಂಗ ತಾರತಮ್ಯ

೬. ತಲ್ಲಾಖ್ ಬಗ್ಗೆ

೭. ಬಹುಪತ್ನಿತ್ವದ ಬಗ್ಗೆ

* * *

# ೩. ಗ್ರಂಥಋಣ


೧. ಸಾಹಿತ್ಯ, ಸಂಸ್ಕೃತಿ ಮತ್ತು ಮಹಿಳೆ : ಸಾ.ರಾ. ಅಬೂಬಕರ್.

೨. ಇಸ್ಲಾಂ ಧರ್ಮದ ಕೊಡುಗೆ : ಎಂ.ಆರ್. ಗಜೇಂದ್ರಗಡ, ಶಾಂತಿ ಪ್ರಕಾಶನ ಮಂಗಳೂರು.

೩. ಭಾರತೀಯ ವಿವಾಹ ಸಂಸ್ಕಾರ : ಮ.ಭ. ಪೆರ್ಲ (ಸಂ), ಕನ್ನಡ ಪ್ರಪಂಚ ಪ್ರಕಾಶನ, ಪುತ್ತೂರು-೨೦೦೦.

೪. ತಪ್ಪು ಕಲ್ಪನೆಗಳು : ಇಬ್ರಾಹಿಂ ಸಈದ್, ಶಾಂತಿ ಪ್ರಕಾಶನ, ಮಂಗಳೂರು-೧೯೯೩.

೫. ಮಹಿಳಾ ಸಾಮಾಜಿಕತೆ : ಜ್ಯೋತಿ ಶಶಿಕುಮಾರ್, ಮಹಿಳಾ ಅಧ್ಯಯನ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬. ಮಹಿಳೆ, ಸಮಾಜ ಮತ್ತು ಸಂಸ್ಕೃತಿ : ಇಂದಿರಾ ಆರ್., ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭. ಇಸ್ಲಾಂ ಧರ್ಮ : ಸಯ್ಯದ್ ಅಬ್ದುಲ್ ಅಲಾ ಮೌದೂದಿ, ಶಾಂತಿ ಪ್ರಕಾಶನ, ಮಂಗಳೂರು.

೮. ಮಹಿಳಾ ಸಂಸ್ಕೃತಿ : ಡಾ. ಆರ್. ಸುನಂದಮ್ಮ, ಸಮತಾ ಅಧ್ಯಯನದ ಕೇಂದ್ರ, ಮೈಸೂರು.

೯. ನಾರಿ : ದಾರಿ-ದಿಗಂತ : ವಿಜಯಾ ದಬ್ಬೆ, ರಚನಾ ಪ್ರಕಾಶನ, ಮೈಸೂರು.

೧೦. ಬೊಗಸೆ (ಮಹಿಳೆ ಸುತ್ತಮುತ್ತ) : ಡಾ. ಕಮಲಾ ಹಂಪನಾ ಸಿ.ವಿ.ಜಿ. ಪಬ್ಲೀಕೇಷನ್ಸ್, ಬೆಂಗಳೂರು.

೧೧. ಇಸ್ಲಾಂ ತತ್ವಸಾರ : ಅಬೂಸಲಿಂ ಅಬ್ದುಲ್, ಹೈ., ಇಸ್ಲಾಮಿ ಪಬ್ಲಿಕೇಷನ್ಸ್, ಹುಬ್ಬಳ್ಳಿ.

೧೨. ನಮ್ಮ ಮಗಳು, ನಮ್ಮ ಶಕ್ತಿ : ಇಂದಿರಾ ಕೃಷ್ಣಪ್ಪ, ಬಿ.ಕೆ. ಪಬ್ಲಿಕೇಷನ್ಸ್, ಬೆಂಗಳೂರು.

೧೩. ಧರ್ಮ-ಮಹಿಳೆ ಮತ್ತು ಸಮಾಜ : ಡಾ. ಶಾಂತಾ ಇಮ್ರಾಪೂರ, ಚೇತನ್ ಪ್ರಕಾಶನ, ಧಾರವಾಡ.

೧೪. ಪಾತರದವರು : ಡಾ. ಶೈಲಜ ಹಿರೇಮಠ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೫. ಭಾರತದಲ್ಲಿ ಶಿಕ್ಷಣದ ಪುನರ್ ನಿರ್ಮಾಣ: ಜಾಕೀರ ಹುಸೇನ, ಸಮಾಚಾರ ಮತ್ತು ಪ್ರಸಾರ ಸಚಿವಾಲಯದ ಪ್ರಕಾಶನ ವಿಭಾಗ, ದೆಹಲಿ.

೧೬. ಭಾರತೀಯ ಸಮಾಜ : ಪ್ರೊ. ಎಮ್. ನಾರಾಯಣ, ಚೇತನ್ ಬುಕ್ ಹೌಸ್, ಮೈಸೂರು.

೧೭. ಶಿಕ್ಷಣ ಮತ್ತು ಸಂಸ್ಕೃತಿ : ಪ್ರೊ. ಲಿ.ವಿ. ವೀರಭದ್ರಪ್ಪ, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೧೮. ಸ್ತ್ರೀ ಲೇಖ : ಡಾ. ಕೆ.ಎಸ್. ರತ್ನಮ್ಮ, ಶ್ರೀ ಕ್ಷೇತ್ರ ಪಬ್ಲಿಕೇಷನ್ಸ್, ಮೈಸೂರು.

೧೯. ಮಹಿಳಾ ಲೋಕ : ನೇಮಿಚಂದ್ರ, ನವಕರ್ನಾಟಕ, ಪಬ್ಲಿಕೇಷನ್ಸ್, ಬೆಂಗಳೂರು.

೨೦. ಪವಿತ್ರ ಕುರ್‌ಆನ್ : ಅಬ್ದುಲ್ ಗಫೂರ್, ೧೯೯೬, ಶಾಂತಿ ಪ್ರಕಾಶನ, ಮಂಗಳೂರು.

೨೧. ಮುಸುಕಿನಲ್ಲಿ ಮುಸ್ಲಿಂ ಮಹಿಳೆ : ಇಬ್ರಾಹಿಂ ಸಈದ್, ಶಾಂತಿ ಪ್ರಕಾಶನ, ಮಂಗಳೂರು.

೨೨. ಭಾರತೀಯ ಸಮಾಜ ಶಾಸ್ತ್ರ : ಚ.ನ. ಶಂಕರ್‌ರಾವ್, ೧೯೯೭, ಕೇಂಬ್ರಿಡ್ಜ್ ಪಬ್ಲಿಷಿಂಗ್ ಕಂಪನಿ, ಬೆಂಗಳೂರು.

೨೩. ಜಲೀತ್ ಅಹಸನ ದದ್ವಾ-ದಾರಿದೀಪ : ಶಾಂತಿ ಪ್ರಕಾಶನ, ಮಂಗಳೂರು.

೨೪. ಕುರ್‌ಆನ್ : ಎಂ.ಎಸ್. ಇಸ್ಲಾಹಿ, ೨೦೦೩, ಕುರ್‌ಆನ್ ವ್ಯಾಖ್ಯಾನ, ಶಾಂತಿ ಪ್ರಕಾಶನ, ಮಂಗಳೂರು.

೨೫. ಧರ್ಮ ವಿಶ್ವಕೋಶ : ಪಾಟೀಲ್ ಡಿ.ಆರ್., ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೬. ಸ್ತ್ರೀವಾದ ನೆಲೆಗಳು ಮತ್ತು ನಿಲುವುಗಳು : ಕಿಶೋರಿ ನಾಯಕ್ ಕೆ. ಲೇ , ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು-೧೯೯೯.

೨೭. ಲಿಂಗತ್ವ ನೆಲೆಗಳು ಮತ್ತು ನಿಲುವುಗಳು : ಕಿಶೋರಿ ನಾಯಕ್, ಮಹಿಳಾ ಅಧ್ಯಯನ ಕೇಂದ್ರ, ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು-೨೦೦೭.

೨೮. ಮಹಿಳೆ ಬಿಡುಗಡೆಯ ಹಾದಿಯಲ್ಲಿ : ಗಾಯತ್ರಿ ಎನ್. (ಲೇ), ನವಕರ್ನಾಟಕ ಪ್ರಕಾಶನ, ಬೆಂಗಳೂರು ಎಫ್.ಐ. ೧೯೯೧.

೨೯. ಚಿಪ್ಪೊಡೆದ ಮೌನ : ಚಂದ್ರಮತಿ ಸೋಂದಾ, (ಲೇ), ಅಭಿರುಚಿ ಪ್ರಕಾಶನ, ಮೈಸೂರು ಎಫ್.ಐ. ೨೦೦೪.

೩೦. ಸ್ತ್ರೀ-ಪುರುಷ : ಛಾಯಾ ಧಾತಾರ್, (ಮೂಲ) ಸರಸ್ವತಿ (ಕ) ಇಳಾ ಪ್ರಕಾಶನ, ಬೆಂಗಳೂರು ಎಫ್.ಐ. ೧೯೯೨.

೩೧. ವಿವಾಹ ಪದ್ಧತಿ : ರಾಜಶೇಖರಯ್ಯ ಎಲ್. (ಲೇ), ಮೈಸೂರು ಎಫ್.ಐ. ೨೦೦೨.

೩೨. ಚಹರೆ : (ಲೇ), ಶ್ರೀಮತಿ ಎಚ್.ಎಸ್., ಇಳಾ ಪ್ರಕಾಶನ, ಬೆಂಗಳೂರು.

೩೩. ಕರ್ನಾಟಕ ಮುಸ್ಲಿಂ ಜಾನಪದ, ಡಾ.ಷಹಸೀನಾ ಬೇಗಂ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೦

೩೪. ಮುಸ್ಲಿಂ ಉತ್ಸವಗಳು ಮತ್ತು ಸಂಸ್ಕಾರಗಳು, ಡಾ.ಹಿರಣ್ಮಯ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೧

* * *

